ಅಂಜನಾಸೂನುಸಾನ್ನಿಧ್ಯಾತ್ ವಿಜಯೇನ ವಿರಾಜಿತಮ್ ।
ಅಜಿತಪ್ರೀತಿಜನಕಂ ಭಜೇऽಹಂ ವಿಜಯಧ್ವಜಮ್ ॥

ಅರ್ಥಿಕಲ್ಪಿತಕಲ್ಪೋऽಯಂ ಪ್ರತ್ಯರ್ಥಿಗಜಕೇಸರೀ ।
ವ್ಯಾಸತೀರ್ಥಗುರುರ್ಭೂಯಾತ್ ಅಸ್ಮದಿಷ್ಟಾರ್ಥಸಿದ್ಧಯೇ ॥

ತಪೋವಿದ್ಯಾವಿರಕ್ತ್ಯಾದಿಸದ್ಗುಣೌಘಾಕರಾನಹಮ್ ।
ವಾದಿರಾಜಗುರೂನ್ ವಂದೇ ಹಯಗ್ರೀವಪದಾಶ್ರಯಾನ್ ॥

ಪೂಜ್ಯಾಯ ರಾಘವೇಂದ್ರಾಯ ಸತ್ಯಧರ್ಮರತಾಯ ಚ ।
ಭಜತಾಂ ಕಲ್ಪವೃಕ್ಷಾಯ ನಮತಾಂ ಕಾಮಧೇನವೇ ॥

ಅನವದ್ಯಾತ್ಮಚಾರಿತ್ರ್ಯಂ ವಾದಿಖದ್ಯೋತಭಾಸ್ಕರಮ್ ।
ವಿದ್ಯಾಮಾನ್ಯಗುರೂನ್ ವಂದೇ ವಿದ್ಯಾವಿದ್ಯೋತಭಾಸ್ವರಮ್ ॥

ಪೃಥ್ವೀಮಂಡಲಮಧ್ಯಸ್ಥಾಃ ಪೂರ್ಣಬೋಧಮತಾನುಗಾಃ ।
ವೈಷ್ಣವಾಃ ವಿಷ್ಣುಹೃದಯಾಸ್ತಾನ್ ನಮಸ್ಯೇ ಗುರೂನ್ ಮಮ ॥

ಹಯವದನ ತನ್ನ ಪ್ರಿಯಳಾದ ಲಕ್ಷ್ಮೀಗೆ
ಜಯವಿತ್ತಕ್ಷೀರಾಂಬುಧಿಯಲ್ಲಿ ।
ಜಯವಿತ್ತಕ್ಷೀರಾಂಬುಧಿಯಲ್ಲಿ ಶ್ರೀಕೃಷ್ಣ
ದಯದಿ ನಮ್ಮೆಲ್ಲರ ಸಲಹಲಿ ॥ ಶೋಭಾನೆ ॥

## ಶಂಖನಾದ

ಮಧ್ವಾಗಮ ಶುದ್ಧಾಗಮ । ಮಧ್ವಮತವೇ ಸಕಲ ಮತಕೆ ಮೇಲೆನಿಸಿದ ಮತ । ಈ ಮಧ್ವಮವಂ ಪಿಡಿದು ನಡೆದರೆ । ಅಬದ್ಧಮತವಂ ತೆಗೆದು ಮುಕ್ತಿಪಥವ ಗೈದು ಸುಕ್ರತುವ್ ॥

ಶ್ರೀ ಶ್ರೀ ---------- ತೀರ್ಥ ಪರಂಪರಾ(ಪ್ರಾಪ್ತ)ಗತ ಶ್ರೀ ------ ತೀರ್ಥ ಕರಕಮಲ ಸಂಜಾತ ಗುರುರಾಜ ಪಟ್ಟಭದ್ರ ವ್ಯಾಖ್ಯಾನ ಸಿಂಹಾಸನಾಧೀಶ್ವರ । ಅಜ್ಞಾನತಿಮಿರ ಮಾರ್ತಾಂಡ ಸುಜ್ಞಾನ ತೇಜೋಮಯ ।ಜಗದ್ಭರಿತ ಪಾಂಚಜನ್ಯಪ್ರಿಯ ಪಾಂಚಜನ್ಯಸೇವಾಂ ಅವಧಾರಯ ॥

******

# ಸಂಕೀರ್ತನೆಗಳು

**ಯಾ ದೃಷ್ಟಾ ನಿಖಿಲಾಘಸಂಘಶಮನೀ ಸ್ಪೃಷ್ಟಾವಪುಃ ಪಾವನೀ**
**ರೋಗಾಣಾಮಭಿವಂದಿತಾ ನಿರಸನೀ ಸಿಕ್ತಾಂತಕತ್ರಾಸಿನೀ ।**
**ಪ್ರತ್ಯಾಸತ್ತಿವಿಧಾಯಿನೀ ಭಗವತಃ ಕೃಷ್ಣಸ್ಯ ಸಂರೋಪಿತಾ**
**ನ್ಯಸ್ತಾ ತಚ್ಚರಣೇ ವಿಮುಕ್ತಿಫಲದಾ ತಸ್ಯೈ ತುಲಸ್ಯೈ ನಮಃ ॥**

## ೧. ಸಂಕೀರ್ತನೆ

ಹರಿ ಹರಿಯೇ ಲಕ್ಷ್ಮಿನಾರಾಯಣ (ಜಯ) ಲಕ್ಷ್ಮಿನಾರಾಯಣ । ಲಕ್ಷ್ಮಿನಾರಾಯಣ (ಮಹ) ಲಕ್ಷ್ಮಿನಾರಾಯಣ ॥ಪ॥

ಶ್ರೀಲಕ್ಷ್ಮೀಶ ಹರಿ ಲಕ್ಷ್ಮಿನಾರಾಯಣ ।
ಶ್ರೀಧರಣೀಶ ಹರಿ ಲಕ್ಷ್ಮಿನಾರಾಯಣ ॥೧॥
ಶ್ರೀವೇಂಕಟೇಶ ––– । ಕಾಯೋ ಸರ್ವೇಶ ––– ॥೨॥
ಶ್ರೀರಾಮಚಂದ್ರ ––– । ಶುಭಗುಣಸಾಂದ್ರ ––– ॥೩॥
ಎನ್ನ ಮನದೊಡೆಯ ––– । ಚೆನ್ನ ಗೋಪೀನಾಥ ––– ॥೪॥
ಆದಿಮೂರುತಿಯೇ ––– । ವೇದಪಾಲಕನೇ ––– ॥೫॥
ಅಕಳಂಕಮಹಿಮನೇ ––– । ಮಕರಕುಂಡಲನೇ ––– ॥೬॥
ಕಸ್ತೂರಿತಿಲಕನೇ ––– । ಕೌಸ್ತುಭಧರನೇ ––– ॥೭॥
ಕ್ಷೀರಸಾಗರನೇ ––– । ವಾರಿಜೋದ್ಭವನೇ ––– ॥೮॥
ವಸುದೇವಸುತನೇ ––– । ಅಸುರಮರ್ದನನೇ ––– ॥೯॥
ನಂಬಿದೆ ನಿನ್ನ ––– । ಕಂಬುಕಂಧರನೇ ––– ॥೧೦॥

## ೨. ಸಂಕೀರ್ತನೆ

ಕಂಡೆ ಕಂಡೆನು ಕೃಷ್ಣ ನಿನ್ನಯ ದಿವ್ಯ ಮಂಗಳಮೂರ್ತಿಯ । ಕಂಡು ಬದುಕಿದೆ ಇಂದು ನಾನು ಕರುಣಿಸೋ ಎನ್ನೊಡೆಯನೆ ॥ಪ॥ ಉಟ್ಟ ಪಟ್ಟೆಯು ಪಿಡಿದ ವಂಕಿಯು ತೊಟ್ಟ ಕೌಸ್ತುಭ ಭೂಷಣ । ಮೆಟ್ಟಿದ ನವರತ್ನದ್ಹಾವಿಗೆ ಇಟ್ಟ ಕಸ್ತೂರಿತಿಲಕವು ॥೧॥ ಮಂದಹಾಸವು ದಂತಪಂಕ್ತಿಯು ಚೆಲುವ ಕಡೆಗಣ್ಣ ನೋಟವು । ಅಂದವಾದ ಕುರುಳುಗೂದಲು ಮುದ್ದು ಸುರಿವುತ ಮುಖವನೆ ॥೨॥ ಮುಳ್ಳೆ ಮಲ್ಲಿಗೆ ದಂಡೆ ಕೊರಳಲಿ ಚೆಲ್ವ ಕಂಕಣ ಕೈಯಲಿ । ಗೊಲ್ಲಸತಿಯರ ಕುಚಗಳಲ್ಲಿ ಜಲ್ಲುಜಲ್ಲುತ ನಲಿವನು ॥೩॥ ಸುರರು ಪುಷ್ಪದ ವೃಷ್ಟಿ ಕರೆಯಲು ಅಸುರರೆಲ್ಲರು ಓಡಲು ।

ಕ್ರೂರ ಕಾಳಿಯ ಫಣಗಳಲ್ಲಿ ಧೀರ ನಲಿನಲಿದಾಡಲು ॥೪॥ ಇಂದು ಎನ್ನ ಬಂಧ ತೀರಿತು ಇಂದು ಎನ್ನ ಕ್ಲೇಶ ಹೋಯಿತು । ಇನ್ನು ಅನ್ಯರ ಭಜಿಸಲೇಕೋ ಮನ್ನಿಸೋ ಗೋಪಿನಾಥನೇ ॥೫॥

## ೩. ಸಂಕೀರ್ತನೆ

ರುಗ್ಮಭೂಷಣ ಪಾಲಿಸೆನ್ನನು ತಿಗ್ಮಕಿರಣಶತಪ್ರಭ । ರುಗ್ಮಿಣೀಪವನಾರ್ಚ್ಯ ಸತ್ಪದಯುಗ್ಮ ಉಡುಪಿನ ಕೃಷ್ಣನೆ ॥೧॥ ದ್ವಾರಕಾಪುರದಲ್ಲಿ ದೇವಕಿ ಸರಸ ಬಾಲಕಲೀಲೆಯ । ತೋರು ಎನುತಲೆ ದಧಿಯ ಮಥಿಸಲು ಕರುಣಿ ಬಾಲ್ಯವ ತೋರಿದೆ ॥೨॥ ತೊಡೆಯನೇರಿ ಸ್ತನ್ಯಪಾನವ ಮಾಡಿ ಮೋದವ ತಾಯಿಗೆ । ಕೊಡುತ ಕಡೆಗೋಲು ನೇಣು ಸಹಿತಲೆ ಪ್ರೌಢ ನೀನಪಹರಿಸಿದೆ ॥೩॥ ಮೊಸರ ಭಾಂಡವನೊಡೆದು ಬೆಣ್ಣೆಯ ನಸುನಗುತಲೇ ಭಕ್ಷಿಸಿ । ಶೇಷಶಯನ ನೀನು ಕುಣಿಯೆ ಸಂತೋಷಪಟ್ಟಳು ದೇವಕಿ ॥೪॥ ದೂರದಿಂದಲೆ ಕಂಡು ರುಗ್ಮಿಣಿ ಹರುಷದಿ ಶಿಶುರೂಪವ । ತರುಣರೂಪವ ನೀನು ಪುನರಪಿ ತೋರೆಲೋ ಸತಿ ನುಡಿದಳು ॥೫॥ ವಿತತ ವೈಭವ ಈ ಪರಿಯಲಿ ಪ್ರತಿಮೆಯನ್ನು ಮಾಡಿಸಿ । ಸತತ ಪೂಜೆಯ ಮಾಳ್ಪರೆ ಅತಿ ಪ್ರೀತಿಯಿಂದ ಕೊಡೆನಗೆ ॥೬॥ ರಮಣಿ ಈ ಪರಿ ಪೇಳೆ ವಿಶ್ವಕರ್ಮನಿಂದ ಮಾಡಿಸಿ । ಕಮಲನಾಭನು ಇತ್ತು ಆದರಲಿ ವಿಮಲಪೂಜೆಯ ಕೊಂಡನು ॥೭॥ ವೀರ ನಿನ್ನವತಾರಕಾರ್ಯವು ಪರಿಸಮಾಪ್ತವು ಆಗಲು ಸುರಪನಂದನ ತತ್ಪ್ರತಿಮೆಯ ಶರಧಿತೀರದಲಿಟ್ಟನು ॥೮॥ ನಾವೆಯಲ್ಲಿ ಗೋಪಿಚಂದನ ಸಂವೃತಾರ್ಚೆಯು ಬರುತಿರೆ। ನಾವೆಯೊಡೆಯಲು ಮಧ್ವಮುನಿಪನು ಭಾವದಿಂದಲೆ ತಂದನು ॥೯॥ ಅಮರರೊಡೆಯ ಶ್ರೀಮರುತ್ಪತಿ ತತ್ಪ್ರತಿಷ್ಠೆಯ ವಿರಚಿಸಿ । ಕುಮುದಬಂಧುಕ್ಷೇತ್ರದಲ್ಲಿ ಅಮಿತ ಪೂಜೆಯ ಮಾಡುತ ॥೧೦॥ ನನ್ನ ಹಿರಿಯರ ಪುಣ್ಯ ಫಲಿಸಲು ನಿನ್ನ ಪೂಜೆಯ ಮಾಡುತ । ಧನ್ಯನಾದೆನು ಮುಕ್ತಿ ಕರಗತ ಎನ್ನಗಾಯಿತು ಕೃಷ್ಣನೇ ॥೧೧॥ ಮಧ್ವಪೂಜಿತ ರಕ್ಷಿಸೆನ್ನನು ಸಾಧ್ವಸೋಜ್ಝಿತ ಸದ್ಗುಣ । ಸಾಧ್ವಲಂಕೃತವೇಷ ಮುಕ್ತಿ ಪದಾಬ್ಜನೇ ರಘುತಿಲಕನೇ ॥೧೨॥

## ೪. ಸಂಕೀರ್ತನೆ

ದೇವರ ದೇವನೆ ಕಾಯೋ ದೇವಕೀನಂದನೆ ಕಾಯೋ । ಜೀವರಾಶಿಗಳಿಗೆ ಸಂಜೀವನ ದೇವನೆ ಕಾಯೋ ॥ಪ॥ ಮಕರಿಗೆ ಕೈ ಸಿಕ್ಕಿ ಮಾನಭಂಗಗೊಂಡ ದೀನ ಪ್ರಕೃತಿಬಂಧನದಿಂದ ಪಾಡುಬಡುತ್ತಿದ್ದೆನಯ್ಯ ॥೧॥ ಕಾಮನೆಂಬ ಕಡುವೈರಿ

ಕಂಡಕಂಡ ಕಡೆಗೆನ್ನ । ಸೀಮೆಯೊಳು ಸುಳಿವಂತೆ ಶ್ರೀಧರ ಮಾಡಿವ ನೋಡು ॥೨॥ ಶ್ರೀಹಯವದನ ನೀನು ಶ್ರಿತಜನ ಕಾಮಧೇನು । ಮಹಂತನೆಂಬುದ ಕೇಳಿ ಮೆಚ್ಚಿ ಬಂದೆನಯ್ಯ ನಿನ್ನ ॥೩॥

## ೫. ಸಂಕೀರ್ತನೆ

ಕೇಳು ಕೇಳೆಲೆ ಗೋಪಿ ನಿನ್ನಯ ಬಾಲಕೃಷ್ಣನ ಚೇಷ್ಟೆಯ । ತಾಳಲಾರೆನು ನೀನು ಕರೆದು ಪೇಳದಿದ್ದರೆ ಬುದ್ಧಿಯ ॥೧॥ ಮನೆ ಮನೆಗಳ ಪೊಕ್ಕು ಪೊಕ್ಕು ಪಾನ ಮಾಡುವ ಬಾಲನು । ಮಾನಿನೀಯರು ಕಂಡು ತಡೆವರೆ ಸ್ತನವ ಪಿಡಿದು ಮುದ್ದಿಪ ॥೨॥ ಬೆಳಕು ಇಲ್ಲದ ಎಡೆಯಲಿದ್ದರು ಪೊಳೆವನೇ ಸುರಧಿಪತಿ । ಉಳಿಯದಂತೆ ಕದ್ದು ಮೆದ್ದವ ಬಾಲನೆಂಬುದು ಉಚಿತವೇ ॥೩॥ ಪರರ ನಷ್ಟವು ಲಾಭವೀತಗೆ ಪರರ ಪೀಡೆಯು ಲೀಲೆಯು ಪರರು ಈ ಪರಿ ತನ್ನನೆಂದರೆ ಪರಮ ಹರುಷವ ಮಾಡುವ ॥೪॥ ಎಲ್ಲರಂತವನಲ್ಲ ದೇವನು ಒಲ್ಲದೇ ಮನ ಚಿತ್ತವು । ನಲ್ಲ ಈ ಮಣಿ ಏನು ಮಹಿಮೆಯ ಬಲ್ಲನೇ ರಘುತಿಲಕನೇ ॥೫॥

## ೬. ಸಂಕೀರ್ತನೆ

ದೇವರ ದೇವನೇ ಬಾರೋ ದೇವಕಿನಂದನ ಬಾರೊ । ದೇವೇಂದ್ರನ ಸಲಹಿದ ದೇವ ಬಾರೊ ಹರಿಯೆ ॥ಪ॥ ಮತ್ಸ್ಯನಾಗಿ ಶ್ರುತಿಯ ತಂದಿತ್ತ ಭಕ್ತವತ್ಸಲ । ಭೃತ್ಯ ಸತ್ಯವ್ರತನೆಂದು ಪೊತ್ತೆ ಬಾರೊ ಹರಿಯೆ ॥೧॥ ಸಾರಿದ ಸುರರಿಗಾಗಿ ನೀರೊಳಗೆ ಮುಳುಗಿದ । ಗಿರಿಯನ್ನುದ್ಧರಿಸಿದ ಕೂರ್ಮ ಬಾರೊ ಹರಿಯೆ ॥೨॥ ಧರೆಯನ್ನುದ್ಧರಿಸಲು ವರಹನಾದವನೆ । ಹಿರಣ್ಯಾಕ್ಷನ ಗೆಲಿದ ಧೀರ ಬಾರೊ ಹರಿಯೇ ॥೩॥ ನಂಬಿದ ಭಕ್ತರ ಕಾವೆನೆಂಬ ಕರುಣದಿ ಕಲ್ಲ । ಕಂಭದಿಂದಲುದಿಸಿದ ಡಂಭ ಬಾರೊ ಹರಿಯೆ ॥೪॥ ಮಾಣವಕ ವೇಷನಾಗಿ ಕ್ಷೋಣಿಯನಳೆದವನೆ । ದಾನವನ ಸೋಲಿಸಿದ ಜಾಣ ಬಾರೊ ಹರಿಯೆ ॥೫॥ ಝಡಿದು ದುಷ್ಟ ನೃಪರ ಗಡಣವ ಬಿಡದೆ । ಕಡಿದುಗ್ರ ಕೊಡಲಿಯ ಪ್ರೌಢ ಬಾರೊ ಹರಿಯೆ ॥೬॥ ವೃಂದಾರಕವಂದ್ಯ ಸೇತುಬಂಧನ ವಿಹಾರ ವಶ । ಕಂಧರನ್ನ ಕೊಂದ ರಾಮಚಂದ್ರ ಬಾರೋ ಹರಿಯೇ ॥೭॥ ಮಲ್ಲರನೆಲ್ಲರ ಸೀಳಿ ಬಲ್ಲಿದ ಮಾವನ ಕೊಂದ । ಗೊಲ್ಲರ ವಲ್ಲಭ ನಮ್ಮ ನಲ್ಲ ಬಾರೋ ಹರಿಯೆ ॥೮॥ ಬುದ್ಧನಾಗಿ ದೈತ್ಯರಿಗಬದ್ಧ ಪದ್ಧತಿಯ ತೋರಿ । ರುದ್ರನ ಗೆಲಿಸಿದ ಸುಭದ್ರ ಬಾರೊ ಹರಿಯೆ ॥೯॥ ಕರ್ಕಶದ ಖಳರನ್ನು ಕಲ್ಕಿರೂಪನಾಗಿ ಮೋಲೆ । ಶಿಕ್ಷಿಸುವ ಸುಜನರ ಪಕ್ಷ ಬಾರೊ ಹರಿಯೆ ॥೧೦॥ ವಿಜಯ ಶ್ರೀಹಯವದನ ಭಜಕರ ಭಾಗ್ಯನೆ । ಸುಜನಾಬ್ಧಿರಾಜ ಶಶಿತೇಜ ಬಾರೋ ಹರಿಯೆ ॥೧೧॥

## ೭. ಸಂಕೀರ್ತನೆ

(ಸೋಮವಾರಕ್ಕೆ) ದಾವ ಕುಲವೆಂದರಿಯಬಾರದು ಗೋವ ಕಾವ ಗೊಲ್ಲನಂತೆ ॥ಪ॥ ತಾನು ಪೋಗಿ ಪಾರಿಜಾತದ ಹೂವ ಸತಿಗೆ ತಂದನಂತೆ ॥ಅ॥ ಗೋಕುಲದಲ್ಲಿ ಪುಟ್ಟಿದನಂತೆ ಗೋವುಗಳನೆ ಕಾಯ್ದನಂತೆ । ಕೊಳಲನೂದಿ ಮೃಗಪಕ್ಷಿಗಳ ಮರುಳುಮಾಡಿದ ದೇವನಂತೆ ॥೧॥ ತರಳತನದಲ್ಲಿ ಒರಳನೆಳೆದು ಮರನ ಮುರಿದು ಮತ್ತಿಯ ತ । ನ್ನೊಡಲ ಒಳಗೆ ಈರೇಳು ಜಗಂಗಳ ಪಡೆದ ತಾಯಿಗೆ ತೋರಿದನಂತೆ ॥೨॥ ಗೊಲ್ಲ ಸತಿಯರ ಮನೆಯ ಪೊಕ್ಕು ಕಳ್ಳತನವ ಮಾಡಿದನಂತೆ ।ಬಲ್ಲಿದ ಪೂತನಿ ವಿಷವನುಂಡು ಮೆಲ್ಲನೆ ತೃಣನ ಕೊಂದನಂತೆ ॥೩॥ ಕಾಲಿಲಿ ಶಕಟನ ಒದ್ದನಂತೆ ಗಾಳಿಕಂಭವ ಕಿತ್ತನಂತೆ । ಕಾಳಿಂಗ ನಾಗನ ಫಣವ ತುಳಿದು ಬಾಲರಿಗೆಲ್ಲ ಒಲಿದನಂತೆ ॥೪॥ ಸರ್ಪ ತನ್ನ ಹಾಸಿಗೆಯಂತೆ ಪಕ್ಷಿ ತನ್ನ ವಾಹನವಂತೆ । ಮುಕ್ಕಣ್ಣ ತನ್ನ ಮೊಮ್ಮಗನಂತೆ ಮುದ್ದು ಮುಖದ ಚೆಲುವನಂತೆ ॥೫॥ ಕಡಲ ಮಗಳ ತಂದನಂತೆ ಕರಡಿ ಮಗಳು ಮಡದಿಯಂತೆ । ಕೊಡೆಯ ಪಿಡಿದು ಬೇಡಿದನಂತೆ ಈರೇಳು ಲೋಕಕೆ ಒಡೆಯನಂತೆ ॥೬॥ ಹಡಗಿನೊಳಗಿಂದ ಬಂದನಂತೆ ಕಡಲತಡಿಯಲಿ ನಿಂದನಂತೆ । ಗುರುಮಧ್ವ ಮುನಿಗೆ ಒಲಿದನಂತೆ ಹಯವದನನ ಚೆಲುವನಂತೆ ॥೭॥

## ೮. ಸಂಕೀರ್ತನೆ

(ಮಂಗಳವಾರಕ್ಕೆ) ದಿತಿಜರ ಬನಕೆ ದುರಂತ ಕೃತಾಂತ । ಗತಿ ನೀನೆ ನಮಗೆ ಗುಣವಂತ ಹನುಮಂತ ॥ಪ॥ ಅಬುಧಿಯ ದಾಟಿ ಸೀತೆಯ ರೂಪ ಕಂಡೆ । ಕುಬುದ್ಧಿ ರಾವಣನ ಪುರವ ಸೂರೆಗೊಂಡೆ ॥ ವಿಬುಧರುತ್ಸಹದಿ ಮಾಡಿದ ಬಲುಂಗಡೆ । ಪ್ರಬುದ್ಧವೃಂದರ ಪುಣ್ಯ ಫಲರಸ ಉಂಡೆ ॥೧॥ ಕೇಸರಿಯ ತನಯ ದಕ್ಷಿಣಕಾಗಿ ಬಂದೆ । ವಾರಿಧಿಬಂಧನಕೆ ಬಲು ಗಿರಿಗಳ ತಂದೆ ॥ ಈಶ ರಘುಪತಿಸೇವೆಗೆ ಘನವಾಗಿ ನಿಂದೆ । ಅಸುರ ರಾವಣನ ಸರ್ವಸೈನ್ಯವ ಕೊಂದೆ ॥೨॥ ಹಯವದನ ಕೃಪಾ ಪ್ರವಾಹವ ಪೊತ್ತ ಆ । ಪ್ರಿಯವಾದ ಭವತರುವಿನ ಬೇರ ಕಿತ್ತೆ ॥ ಭಯವ ಖಂಡಿಸಿ ಸಂತೋಷವ ನಮಗಿತ್ತೆ । ಜಯ ಜಯ ಪ್ರಾಣಸುತ ನಮೋ ನಮಸ್ತೇ॥೩॥

## ೯. ಸಂಕೀರ್ತನೆ

(ಬುಧವಾರಕ್ಕೆ) ನೀರೆ ತೋರೆಲೆ ನೀರೆ ತೋರೆಲೆ ನೀಲವರ್ಣದ ದೇವನ। ಭಾಮೆ ತೋರೆಲೆ ಭಾಮೆ ತೋರೆಲೆ ಬಾಲ ಉಡುಪಿನ ಕೃಷ್ಣನ ॥೧॥ ಕಾಲಲಂದುಗೆ ಕಡಗ ಕಂಕಣ ಲೋಲ ಉಡುಪಿಗೆ ಬಂದನ । ಬಾಲ ಲೀಲೆಯ ಜಗಕೆ ತೋರಿದ ಗೋಪಾಲ ಉಡುಪಿನ ಕೃಷ್ಣನ ॥೨॥ ಕಡೆವ ಕಡೆಗೋಲ ನೇಣು ಪಿಡಿತಲಿ

ಹಡಗಿನೊಳಗಿಂದ ಬಂದವನ । ಬಿಡದೆ ಭಕ್ತರ ಒಡನೆ ಪಾಳಿವ ರಂಗ ಉಡುಪಿನ ಕೃಷ್ಣನ ॥೩॥ ಮುದ್ದು ಮುಖದವ ಮೂರು ಜಡೆಯಲಿ ಇದ್ದ ಉಡುಪಿನ ಸ್ಥಳದಲಿ। ಒದ್ದು ಶಕಟನ ಆದಿಗುರುಗಳ ಮುದ್ದು ಉಡುಪಿನ ಕೃಷ್ಣನ ॥೪॥ ಮಲ್ಲರೊಡಗೂಡಿ ಮಥುರಪುರದಲಿ ಬಿಲ್ಲಹಬ್ಬವ ನಡೆಸಿದ । ಬಲ್ಲಿದ ಕಂಸಾಸುರನ ಸೀಳಿದ ಮುದ್ದು ಉಡುಪಿನ ಕೃಷ್ಣನ ॥೫॥ ಬಾಲಸನ್ಯಾಸಿಗಳು ನಿನ್ನನು ಪ್ರೇಮದಿಂದಲಿ ಭಜಿಸಲು । ಆಲದೆಲೆಯ ಮೇಲೆ ಮಲಗಿದ ಗೋಪಾಲ ಉಡುಪಿನ ಕೃಷ್ಣನ ॥೬॥ ಅದ್ವಯ ಹರಿ ಬ್ರಹ್ಮ ವಲ್ಲಭ ವಿದ್ಯಸಾರಥಿ ಮಾಡಿದೆ । ಸದ್ಗುರು ಮುನಿ ವಾದಿರಾಜನ ಮುದ್ದು ಉಡುಪಿನ ಕೃಷ್ಣನ ॥೭॥

## ೧೦. ಸಂಕೀರ್ತನೆ

(ಗುರುವಾರಕ್ಕೆ) ಎನ್ನೊಡೆಯ ಹಯಗ್ರೀವ ಅನುದಿನ ನೆನೆದರೆ । ಪುಣ್ಯ ಹೀನರಿಗೆ ದೊರಕೊಂಬುದೆಲೆ ಮನುಜ ॥ಪ॥ ಭಕ್ತಿಬೇಕು ಪರಮ ವಿರಕ್ತಿ ಬೇಕು ಹರಿ ತನ್ನಿಂ । ದುತ್ತಮ ಮತ್ತೊಬ್ಬನೆಂಬ ನೆನಹಿರಬೇಕು ॥ ಮೊತ್ತದಿಂದ್ರಿಯಂಗಳ ನಿಗ್ರಹ ಬೇಕು ಬೊಮ್ಮಾದಿಗಳು । ಉತ್ತಮರೆನ್ನಿಂದ ಭೃತ್ಯ ಅಚ್ಯುತಂಗೆ ಇರಬೇಕು ॥೧॥ ಅರಿಷಡ್ವರ್ಗದ ವಿಜಯ ಬೇಕು ಗುರು ಕುಲನಿಲಯ । ಗುರು ಮಧ್ವಮತ ಬೇಕು ಗುರುಭಕ್ತಿ ಬೇಕು ॥ ಹರಿಯ ಡಿಂಗರಿಗರ ಸಂಗ ಬೇಕು ಶಂಖ ಚಕ್ರ । ಧರನಾಗಿರಬೇಕು ಸ್ವರೂಪಯೋಗ್ಯತೆ ಬೇಕು ॥೨॥ ವೇದಾಭ್ಯಾಸವು ಬೇಕು ಅದರರ್ಥ ಹರಿಯೆಂಬ । ಬೋಧವಿರಬೇಕು ಖಳರಳಿಯಲು ಬೇಕು ॥ ವಾದಿರಾಜನೊಡೆಯ ಶ್ರೀಹಯವದನನ ದಿವ್ಯ । ಪಾದವ ನಂಬಿರಬೇಕಿಹಪರಾದಿಗಳ ಬಯಸುವರೆ ॥೩॥

## ೧೧. ಸಂಕೀರ್ತನೆ

(ಶುಕ್ರವಾರಕ್ಕೆ) ಬುದ್ಧಿಯ ಹೇಳಮ್ಮ ನೀನು ಮುದ್ದು ಬಾಲಕೃಷ್ಣನಿಗೆ । ಕದ್ದು ಬೆಣ್ಣೆ ಮೆಲುವಾಗ ಕರೆಯೆ ಗೋಪ್ಯಮ್ಮ ॥೧॥ ಕಾಲು ಕಾಲು ನಲಿವಾಗ ಧ್ವನಿಪಾಲನಮ್ಮ। ಕೆರೆನೀರೊಳಗೆ ಬಿದ್ದು ತೇಲಿಪೋದನಮ್ಮ ॥೨॥ ಬಾಲರ ಮಂಡೆಗೆ ಹೆಟ್ಟೋದುಚಿತ ವೇನಮ್ಮ। ಕೋಲು ಕೊಂಡು ಕೊಲ್ಲಹೋದರೆ ಓಡಿ ಹೋದನಮ್ಮ ॥೩॥ ಬಟ್ಟಲೊಳಗಿನ ಹಾಲು ಕುಡಿದಾತನಮ್ಮ ॥ ಕಟ್ಟಿದ ಕರುಗಳ ಬಿಚ್ಚಿ ಬಿಟ್ಟು ಹೋದನಮ್ಮ ॥೪॥ ಉಟ್ಟ ಸೀರೆ ಸೆಳೆವುದು ಉಚಿತವೇನಮ್ಮಾ । ದಿಟ್ಟತನ ಬೇಡೆಂದು ಹೇಳೆ ಗೋಪ್ಯಮ್ಮ ॥೫॥ ಹಾವಿನ ಹೆಗಲ ಮೇಲೇರಿ ಬಂದನಮ್ಮ । ಹಾವಿನಲ್ಲಿ ನಿದ್ದೆಗೈವುದುಚಿತವೇನಮ್ಮ ॥೬॥ ಸಾವಿರ ಹೆಸರುಳ್ಳ ದೇವ ಕಾಣಮ್ಮ । ಭಾವಜ್ಞ ಕಾವೇರಿರಂಗ ಕಾಣಮ್ಮ ॥೭॥

## ೧೨. ಸಂಕೀರ್ತನೆ

(ಶನಿವಾರಕ್ಕೆ) ನಿನ್ನ ಪಾದವ ನಂಬಿದೆ ನಾ ನಿನ್ನನೆ ಮೊರೆಹೊಕ್ಕೆನು । ನಿನ್ನ ವಾಸರ ವಾಸ ನಾನು ಪ್ರಸನ್ನ ವೇಂಕಟ ಪಾಹಿ ಮಾಮ್ ॥ಪ॥ ಲೋಕಲೋಕಂಗಳನೆಲ್ಲಾನೇಕ ರೂಪದಿ ಸಲಹಿದೆ । ಸಾಕು ಸಾಸಿರನಾಮದೊಡೆಯ ಲೋಕ ವೇಂಕಟ ಪಾಹಿ ಮಾಮ್ ॥೧॥ ಮಂದರಾದ್ರಿಯನೊಂದು ಬೆರಳಲಿ ಬಂದು ನೀ ನಲಿದೆತ್ತಿದೆ । ಸಿಂಧುಶಯನಾನಂದ ಮೂರುತಿ ತಂದೆ ವೇಂಕಟ ಪಾಹಿ ಮಾಮ್ ॥೨॥ ರಾಮ ಭಾರ್ಗವರಾಮ ದಶರಥರಾಮ ರಘುಕುಲರಾಮನೆ । ಕಾಮಿತಾರ್ಥವನೀವ ದಯಾಳು ಕರುಣಿ ವೇಂಕಟ ಪಾಹಿ ಮಾಮ್ ॥೩॥ ಕರಿಯು ಮೊರೆಯಿಡೆ ಕೇಳಿ ಬೇಗದಿ ಭರದಿ ಮಕರಿಯ ಸೀಳಿದೆ । ಪರಮ ಭಕ್ತರ ಧುರದಿ ಪಾಲಿಪ ವರದ ವೇಂಕಟ ಪಾಹಿ ಮಾಮ್ ॥೪॥ ನರಗೆ ಸಾರಥಿಯಾಗಿ ತುರಗವ ಭರದಿ ನೀನೇ ನಡೆಸಿದೆ । ಹರಿ ಮುಕುಂದ ಮುರಾರಿ ರಕ್ಷಿಸು ವರದ ವೇಂಕಟ ಪಾಹಿ ಮಾಮ್ ॥೫॥ ನಾರದಾದಿ ಮುನೀಂದ್ರರೆಲ್ಲರ ಭರದಿ ನೀನೇ ಪಾಲಿಪೆ । ಗುರುವ ಮೂಡಲಗಿರಿಯ ವಾಸ ಹರಿಯೆ ವೇಂಕಟ ಪಾಹಿ ಮಾಮ್ ॥೬॥ ಶರಣು ಶ್ರೀವೈಕುಂಠನಾಮಕ ಶರಣು ಶ್ರೀಪುರುಷೋತ್ತಮ । ಶರಣು ಶ್ರೀಧರ ಗರುಡವಾಹನ ಶರಣು ವೇಂಕಟ ಪಾಹಿ ಮಾಮ್ ॥೭॥

## ೧೩. ಸಂಕೀರ್ತನೆ

ಗೋವಿಂದ ಗೋವಿಂದ ರಾಮ । ಗೋವಿಂದ ನಾರಾಯಣ ॥
ಗೋವಿಂದ ಗೋಪಾಲಕೃಷ್ಣ । ಗೋವಿಂದ ನಾರಾಯಣ ॥ಪ॥

ಸೋಮಾಸುರನೆಂಬ ದೈತ್ಯ । ಸಾಮಕವೇದವನೊಯ್ಯಲುಮ ॥ ಸೋಮಾಸುರನನ್ನು ಕೊಂದು । ಸಾಮಕ ವೇದವ ತಂದನುಮ ॥೧॥ ಗುಡ್ಡವು ಮುಳುಗಿ ಪೋಗಲು ನಮ್ಮದೇವ । ಗುಡ್ಡವ ಬೆನ್ನಲಿ ಪೊತ್ತನುಮ ॥ ಗುಡ್ಡದಂತೆ ಅಸುರರನೆಲ್ಲ । ಅಡ್ಡಗೆಡಹಿ ಬಿಸುಟನುಮ ॥೨॥ ಚಿನ್ನ ಗಣ್ಣಿನವನು ಬಂದು । ಕನ್ನೆ ಹೆಣ್ಣನೊಯ್ಯಲುಮ ॥ ವರ್ಣ ರೂಪವ ತಾಳಿ ಅಸುರನ । ಛಿನ್ನ ಭಿನ್ನವ ಬಗಿದನುಮ ॥೩॥ ಕಂಭದಿಂದಲಿ ಉದಿಸಿ ನಮ್ಮ ದೇವ । ಜಂಬಾದಸುರನ ಬಗಿವನುಮ ॥ ನಂಬಿದ ಪ್ರಹ್ಲಾದನ್ನ ಕಾಯಿದ । ಅಂಬುಜನಾಭ ನೃಸಿಂಹನುಮ ॥೪॥ ಬಲು ಮುರುಡನ್ನಾಗಿ ಭೂಮಿಯ । ಬಲಿಯ ದಾನವ ಬೇಡಿದನುಮ ॥ ಇಳೆಯ ಈರಡಿಯ ಮಾಡಿ । ಬಲಿಯ ಪಾತಾಳಕ್ಕೊತ್ತಿವನುಮ ॥೫॥ ಕೊಡಲಿಯನ್ನು ಪಿಡಿದು ನಮ್ಮ ದೇವ । ಕಡಿದ ಕ್ಷತ್ರಿಯಕುಲವನುಮ ॥ ಪಡೆದ ತಾಯ ಶಿರವ ತರಿದು । ಪಡೆದನಾಕೆಯ ಪ್ರಾಣನುಮ ॥೬॥ ಎಂಟೆರಡು ತಲೆಯಾದಸುರನ । ಕಂಠವ ಭೇದಿಸಿ

ಬಿಸುಟನುಮ ॥ ಒಂಟಿ ರೂಪವ ತಾಳಿ ಲಂಕೆಯ । ಬಂಟ ವಿಭೀಷಣಗಿತ್ತನುಮ ॥೭॥ ಸೋಳ ಸಾಸಿರ ಗೋಪಿಯರೊಡನೆ । ಕೇಳ ಮೇಳದೊಳಿಪ್ಪನುಮ ॥ ಬಾಲಕನಾಗಿ ತನ್ನ ರೂಪವಲಿ ಶ್ರೀ । ಲೋಲ ಲಕ್ಷ್ಮಿಯರಸನುಮ ॥೮॥ ಒಪ್ಪದಿಂದಲಿ ಬಂದು ನಮ್ಮ ದೇವ । ಇಪ್ಪವನವೊಳಗಿಪ್ಪನುವು ॥ ಸರ್ಪಶರನ್ನಾಗಿ ಪೋಗಿ । ತ್ರಿಪುರಸಂಪಾರ ಮಾಡಿವನುವು ॥೯॥ ಯಲಮ ಯಲಮ ಯಲಮ ನಮ್ಮ ದೇವ । ಬಲ್ಲಿದ ಕಲ್ಕ್ಯವತಾರನುವು ॥ ಇಳಿಯ ಸ್ವರ್ಗ ಪಾತಾಳ ಕೊಡೆಯ । ಚೆಲುವ ಶ್ರೀಹಯವದನನುಮ ॥೧೦॥

## ೧೪. ಸಂಕೀರ್ತನೆ

ನೆನೆವೆನನುದಿನ ನೀರನೀಲದ ವರ್ಣನ ಗುಣಾರನ್ನನ ॥ಪ॥
ಮುನಿಜನಪ್ರಿಯ ಮುದ್ದು ಉಡುಪಿಯ ರಂಗನ ದಯಾಪಾಂಗನ ॥ಅ.ಪ.॥

ದೇವಕೀ ಜಠರೋದಯಾಂಬುಧಿ ಚಂದ್ರನ ಗುಣಸಾಂದ್ರನ
ಗೋವ್ರಜಕೆ ಘನ ಯಮುನೆದಾಟಿ ಬಂದನಾ ಅಲ್ಲಿ ನಿಂದನ
ಮಾವ ಕಳುಹಿದ ಮಾಯೆ ಸತಿಯ ಕೊಂದನ ಚಿದಾನಂದನ
ದೇವರಿಪು ದೈತ್ಯೇಂದ್ರ ಶಕಟನ ಒದ್ದನ ಶ್ರುತಿಸಿದ್ಧನ ॥೧॥

ಗೋಕುಲದ ಗೋಪಿಯರ ವಂಚಕ ಚೋರನ ಬಹುಧೀರನ
ಅನೇಕ ನಾರಿಯರ್ವಸನವನು ಕದ್ದೊಯ್ದನ ತುರಗಾಯ್ದನ
ನಾರಿಯರಿಗರಿಧೇನುವತ್ಸವಿಘಾತ ವಿಖ್ಯಾತನ
ಕಾಕುಮತಿ ಕಾಳಿಂಗನ ಫಣ ತುಳಿದನ ಅವಗೊಲಿದನ ॥೨॥

ಶೈಲವನು ಅಹಿಶಯನ ಬೆರಳಲಿ ಆಂತನ ಬಲವಂತನ
ಸೋಳಸಾಸಿರ ಬಾಲೆಯರ ಕರ ಪಿಡಿದನ ಸುಧೆಗುಡಿದನ
ಬಾಲೆ ಭಾಮಿನಿರೊಡನೆ ಜಲಕ್ರೀಡೆಗೆಳೆದನ ಅಲ್ಲಿ ನಲಿದನ
ಲೀಲೆಯಲಿ ಲಲನೆಯರಿಗಿಷ್ಟವ ಕೊಟ್ಟನ ಸಂತುಷ್ಟನ ॥೩॥

ಕ್ರೂರ ಬಕಕೇಶಿಗಳನೆಲ್ಲರ ಸೀಳ್ದನ ಸುರರಾಳ್ದನ
ಅಕ್ರೂರ ಕರೆಯಲು ಹರುಷದಿಂದಲಿ ಬಂದನ ಸುರವಂದ್ಯನ
ನಾರಿ ಕುಬುಜಗೆ ಭೂರಿ ಸಂತಸವಿತ್ತನ ಅತಿ ಶಕ್ತನ
ವಾರಣವನು ಕೆಡಹಿದಪ್ರತಿಮಲ್ಲನ ಅತಿ ಚೆಲ್ವನ ॥೪॥

ಸುಲಭದಿಂದಲಿ ಶಿವನ ಧನುವನು ಮುರಿದನ ನೆರೆಮೆರೆದನ
ಮಲೆತ ಮಲ್ಲರ ಕೆಡಹಿ ರಂಗದಿ ನಿಂತನ ಜಯವಂತನ

ಖಳಕುಲಾಗ್ರಣಿ ಕಂಸನೆಂಬನ ಹೊಡೆದನ ಹುಡಿಗೆಡೆದನ
ಬಲದಿ ತಾಯ್ತಂದೆಯರ ಬಂಧನ ಕಡಿದನ ಯಶ ಪಡೆದನ ||೫||

ಭುವನ ಪಟ್ಟವನುಗ್ರಸೇನಗೆ ಕೊಟ್ಟನ ಅತಿ ಶ್ರೇಷ್ಠನ
ಯುವತಿಯರಿಗುದ್ಧವನ ಕಳುಹಿದ ಜಾಣನ ಸುಪ್ರವೀಣನ
ವಿವಿಧ ವಿದ್ಯಾ ಕಲೆಗಳೆಲ್ಲವನರಿತನ ಶುಭಚರಿತನ
ಜವನ ಶಿಕ್ಷಿಸಿ ದ್ವಿಜನ ಕಂದನ ತಂದನ ಆನಂದನ ||೬||

ಕುಮತಿ ಖಳ ಮಾಗಧನ ಯುದ್ಧದಿ ಗೆದ್ದನ ಅನವದ್ಯನ
ದ್ಯುಮಣಿ ಸಮ ದ್ವಾರಕಿಯ ರಚಿಸುದಾರನ ಗಂಭೀರನ
ಸುಮತಿಮುಚುಕುಂದನೊದ್ದ ಯವನನ ಸುಟ್ಟನ ಅತಿ ದಿಟ್ಟನ
ವಿಮಲ ಸುಚರಿತ್ರಾಷ್ಟಮಹಿಷಿಯರಾಳ್ದನ ನೆರೆಬಾಳ್ದನ ||೭||

ಮುರನರಕ ಮುಖ್ಯರನ್ನು ಚಕ್ರದಿ ತರಿದನ ಕರಿವರದನ
ದುರುಳ ಶಿಶುಪಾಲಾದಿ ದೈತ್ಯರನ ತಂದನ ಬಹುಶೂರನ
ಸುರತರುವ ಸತಿಗಾಗಿ ತಂದ ಸಮರ್ಥನ ಜಗತ್ಕರ್ತನ
ಕುರುಕುಲಕೆ ಲಯವಿತ್ತ ಪಾಂಡವಪ್ರಿಯನ ಕವಿಗೇಯನ ||೮||

ಇಂತು ಸಲಹುವ ಇಳೆಸುಜನರನ ಕಾಂತನ ಸಿರಿವಂತನ
ಪಂಥವುಳ್ಳ ಪ್ರಸನ್ನ ಶ್ರೀ ಹಯವದನನ ಮುನಿಮಾನ್ಯನ
ಸಂತಸದೊಳೀಸಾರ ಕಥೆಯನು ಕೇಳ್ವರ ನೆರೆ ಬಾಳ್ವರ
ಕಂತುಪಿತ ಕಾರುಣ್ಯದಿಂದಲಿ ಪೊರೆವನು ಸುಖಗರೆವನು ||೯||

## ೧೫. ಸಂಕೀರ್ತನೆ

ಕೊಲ್ಲು ಬೇಗ ಕಳ್ಳರಾ ಶ್ರೀನಲ್ಲ ಮಧ್ವವಲ್ಲಭ । ಕೊಲ್ಲದಿದ್ದರೆ ನಿಲ್ಲರವರು ಕಲಿಯುಗದ ಕಳ್ಳರು ॥ಪ॥ ಎಲ್ಲ ಕೂಡಿ ನಿನ್ನ ಪೂಜೆಗೆ ಕಲ್ಲು ಹಾಕುತ್ತಿದ್ದರು । ಗಡ । ಬಲ್ಲೆನವರ ಕೊಲೆ(ಗುಲ್ಲು)ಗಾರರ ಹಲ್ಲ ಕೀಳದೆ ನಿಲ್ಲರು ॥೧॥ ಒಳ್ಳೆ ಮಾತನಾಡಲವರು ಕೋಲಾಹಲವ ಮಾಡಿ ಬೈವರು । ಗೆಲ್ಲು ಶಕ್ತಿ ಇಲ್ಲ ನಮಗೆ ಬಲ್ಲೆ ನೀ ಮಧ್ವಗೊಲಿದವನೆ ॥೨॥ ಕಳ್ಳತನವನೊಲ್ಲೆನೆಂಬರು ಮುಳ್ಳು ಮೊನೆಯಂತಿಹರು । ಚೆಲ್ವ ಹಯವದನವರ ಕೊಲ್ಲು ಕೊಲ್ಲು ನಮ್ಮ ಗೆಲಿಸು ॥೩॥

## ೧೬. ಸಂಕೀರ್ತನೆ

ಮತ್ಸ್ಯಾಕೃತಿಧರ ಜಯ ದೇವೇಶ । ವೇದವಿಬೋಧಕ ಕೂರ್ಮಸ್ವರೂಪ ॥ ಮಂದರಗಿರಿಧರ ಸೂಕರರೂಪ । ಭೂಮಿವಿದಾರಕ ಜಯ ದೇವೇಶ ॥೧॥ ಕಾಂಚನಲೋಚನ ನರಹರಿರೂಪ । ದುಷ್ಟಹಿರಣ್ಯಕಭಂಜನ ಜಯ ಭೋ ॥

ಜಯ ಜಯ ವಾಮನ ಬಲಿವಿಧ್ವಂಸಿನ್ । ದುಷ್ಟಕುಲಾಂತಕ ಭಾರ್ಗವರೂಪ ॥೨॥ ಜಯ ವಿಶ್ರವಸಃ ಸುತವಿಧ್ವಂಸಿನ್ । ಜಯ ಕಂಸಾರೇ ಯದುಕುಲತಿಲಕ ॥ ಜಯ ವೃಂದಾವನಚರ ದೇವೇಶ । ದೇವಕಿನಂದನ ನಂದಕುಮಾರ ॥೩॥ ಜಯ ಗೋವರ್ಧನಧರ ವತ್ಸಾರೇ । ಧೇನುಕಭಂಜನ ಜಯ ಕಂಸಾರೇ ॥ ರುಗ್ಮಿಣಿನಾಯಕ ಜಯ ಗೋವಿಂದ । ಸತ್ಯಾವಲ್ಲಭ ಪಾಂಡವಬಂಧೋ ॥೪॥ ಖಗವರವಾಹನ ಜಯ ಪೀತಾರೇ । ಜಯ ಮುರಭಂಜನ ಪಾರ್ಥಸಖೇ ತ್ವಮ್ ॥ ಭೌಮವಿನಾಶಕ ದುರ್ಜನಹಾರಿನ್ । ಸಜ್ಜನ ಪಾಲಕ ಜಯ ದೇವೇಶ ॥೫॥ ಶುಭಗುಣಗಣಪೂರಿತ ವಿಶ್ವೇಶ । ಜಯ ಪುರುಷೋತ್ತಮ ನಿತ್ಯವಿಬೋಧ ॥ ಭೂಮಿಭರಾಂತಕ ಕಾರಣರೂಪ । ಜಯ ಖರಭಂಜನ ದೇವವರೇಣ್ಯ ॥೬॥ ವಿಧಿಭವಮುಖಸುರಸತತ ಸುವಂದಿತ । ಸಚ್ಚರಣಾಂಬುಜಕಂಜಸುನೇತ್ರ ॥ ಸಕಲಸುರಾಸುರನಿಗ್ರಹಕಾರಿನ್ । ಪೂತನಿಮಾರಣ ಜಯ ದೇವೇಶ ॥೭॥ ಯದ್ಭ್ರೂವಿಭ್ರಮಮಾತ್ರಾತ್ತದಿದ- । ಮಾಕಮಲಾಸನಶಂಭುವಿಪಾದ್ಯಂ । ಸೃಷ್ಟಿಸ್ಥಿತಿಲಯಮೃಚ್ಛೃತಿ ಸರ್ವಮ್ । ಸ್ಥಿರಚರವಲ್ಲಭ ಸ ತ್ವಂ ಜಯ ಭೋ ॥೮॥ ಜಯ ಯಮಳಾರ್ಜುನಭಂಜನ ಮೂರ್ತೇ । ಜಯ ಗೋಪೀಕುಚಕುಂಕುಮಾಂಕಿತಾಂಗ ॥ ಪಾಂಚಾಲೀಪರಿಪಾಲನ ಜಯ ಭೋ । ಜಯ ಗೋಪೀ ಜನರಂಜನ ಜಯ ಭೋ ॥೯॥ ಜಯ ರಾಸೋತ್ಸವರ ಲಕ್ಷ್ಮೀಶ । ಸತತಸುಖಾರ್ಣವ ಜಯ ಕಂಜಾಕ್ಷ ॥ ಜಯ ಜನನೀಕರಪಾಶಸುಬದ್ಧ । ಹರಣಾನ್ನವನೀತಸ್ಯ ಸುರೇಶ ॥೧೦॥ ಬಾಲಕ್ರೀಡನಪರ ಜಯ ಭೋ ತ್ವಮ್ । ಮುನಿವರವಂದಿತಪದಪದ್ಮೇಶ ॥ ಕಾಲಿಯಫಣೀಫಣಮರ್ದನ ಜಯ ಭೋ । ದ್ವಿಜಪತ್ನ್ಯರ್ಪಿತಮತ್ಸಿ ವಿಭೋಽನ್ನಮ್ ॥೧೧॥ ಕ್ಷೀರಾಂಬುಧಿಕೃತನಿಲಯನ ದೇವ । ವರದ ಮಹಾಬಲ ಜಯ ಜಯಕಾಂತ ॥ ದುರ್ಜನಮೋಹಕ ಬುದ್ಧಸ್ವರೂಪ । ಸಜ್ಜನಬೋಧಕ ಕಲ್ಕಿಸ್ವರೂಪ ॥೧೨॥ ಜಯ ಯುಗಕೃತದುರ್ಜನವಿಧ್ವಂಸಿನ್ । ಜಯ ಜಯ ಜಯ ಭೋ ಜಯ ವಿಶ್ವಾತ್ಮನ್ ॥೧೩॥ ಇತಿ ಮಂತ್ರಂ ಪಠನ್ನೇವ ಕುರ್ಯಾನ್ನೀರಾಜನಂ ಬುಧಃ ॥

## ೧೭. ಸಂಕೀರ್ತನೆ

ಯಾನಿ ಕಾನಿ ಚ ಪಾಪಾನಿ ಜನ್ಮಾಂತರಕೃತಾನಿ ಚ । ತಾನಿ ತಾನಿ ವಿನಶ್ಯಂತಿ ಪ್ರದಕ್ಷಿಣ ಪದೇ ಪದೇ ॥೧॥ ಯನ್ಮೂಲೇ ಸರ್ವತೀರ್ಥಾನಿ ಯನ್ಮಧ್ಯೇ ಸರ್ವದೇವತಾಃ । ಯದಗ್ರೇ ಸರ್ವವೇದಾಶ್ಚ ತುಲಸಿ ತ್ವಾಂ ನಮಾಮ್ಯಹಮ್ ॥೨॥ ಪ್ರಸೀದ ತುಲಸೀ ದೇವಿ ಪ್ರಸೀದ ಹರಿವಲ್ಲಭೇ । ಕ್ಷೀರೋದಮಥನೋದ್ಭೂತೇ ತುಲಸಿ ತ್ವಾಂ ನಮಾಮ್ಯಹಮ್ ॥೩॥ ಯಜ್ಞೇಶಾಚ್ಯುತ ಗೋವಿಂದ ಮಾಧವಾನಂತ ಕೇಶವ । ಕೃಷ್ಣ ವಿಷ್ಣೋ ಹೃಷೀಕೇಶ ವಾಸುದೇವ ನಮೋಽಸ್ತು ತೇ ॥೪॥ ಮಂಗಲಂ ಭಗವಾನ್ ವಿಷ್ಣುರ್ಮಂಗಲಂ ಮಧುಸೂದನಃ । ಮಂಗಲಂ ದೇವಕೀ

ಪುತ್ರೋ ಮಂಗಲಂ ಗರುಡಧ್ವಜಃ ॥೫॥ ಸರ್ವಮಂಗಲಮಾಂಗಲ್ಯೇ ಶಿವೇ ಸರ್ವಾರ್ಥಸಾಧಿಕೇ । ಶರಣ್ಯೇ ತ್ರ್ಯಂಬಕೇ ದೇವಿ ನಾರಾಯಣಿ ನಮೋಽಸ್ತು ತೇ ॥೬॥ ನಮಃ ಪಂಕಜನಾಭಾಯ ನಮಃ ಪಂಕಜಮಾಲಿನೇ । ನಮಃ ಪಂಕಜನೇತ್ರಾಯ ನಮಸ್ತೇ ಪಂಕಜಾಂಘ್ರಯೇ ॥೭॥ ಕಲ್ಯಾಣಮ್ಭುತಗಾತ್ರಾಯ ಕಾಮಿತಾರ್ಥಪ್ರದಾಯಿನೇ। ಶ್ರೀಮದ್ವೇಂಕಟನಾಥಾಯ ಶ್ರೀನಿವಾಸಾಯ ತೇ ನಮಃ ॥೮॥ ಬುದ್ಧಿರ್ಬಲಂ ಯಶೋ ಧೈರ್ಯಂ ನಿರ್ಭಯತ್ವಮರೋಗತಾ । ಅಜಾಡ್ಯಂ ವಾಕ್ಪಟುತ್ವಂ ಚ ಹನೂಮತ್ಸ್ಮರಣಾದ್ಭವೇತ್ ॥೯॥ ಕಾಯೇನ ವಾಚಾ ಮನಸೇಂದ್ರಿಯೈರ್ವಾ ಬುದ್ಧ್ಯಾತ್ಮನಾ ವಾಽನುಸೃತಃ ಸ್ವಭಾವಃ । ಕರೋಮಿ ಯದ್ಯತ್ ಸಕಲಂ ಪರಸ್ಮೈ ನಾರಾಯಣಾಯೇತಿ ಸಮರ್ಪಯಾಮಿ ॥೧೦॥

## ೧೮. ಸಂಕೀರ್ತನೆ

ಕಲ್ಯಾಣಂ ತುಳಸಿ ಕಲ್ಯಾಣಮ್ । ಕಲ್ಯಾಣವೇ ನಮ್ಮ ಕೃಷ್ಣ ಶ್ರೀ ತುಳಸಿಗೆ । ಬಲ್ಲಿದ ಶ್ರೀವಾಸುದೇವನಿಗೆ ॥ಪ॥ ಅಂಗಳದೊಳಗೆಲ್ಲ ತುಳಸಿಯ ವನ ಮಾಡಿ । ಶೃಂಗಾರವ ಮಾಡಿ ಶೀಘ್ರದಿಂದ ॥ ಕಂಗಳ ಪಾಪವ ಪರಿಹರಿಸುವ ಮುದ್ದು । ರಂಗ ಬಂದಲ್ಲಿ ನೆಲಸಿದನು ॥೧॥ ಮಿಂದು ಮಡಿಯನುಟ್ಟು ಸಂದೇಹವ ಬಿಟ್ಟು । ತಂದ ಶ್ರೀಗಂಧಾಕ್ಷತೆಗಳಿಂದ ॥ ಸಿಂಧುಶಯನನ ವೃಂದಾವನದಿ ಪೂಜಿಸೆ । ಕುಂದದ ಭಾಗ್ಯವ ಕೊಡುತಿಹಳು ॥೨॥ ಭಕ್ಷ್ಯಭೋಜ್ಯಂಗಳ ನೈವೇದ್ಯವನಿತ್ತು । ಲಕ್ಷ ಬತ್ತಿಯ ದೀಪವ ಹಚ್ಚಿ ಅ॥ ಧೋಕ್ಷಜ ಸಹಿತ ವೃಂದಾವನ ಪೂಜಿಸೆ । ಸಾಕ್ಷಾತ್ ಮೋಕ್ಷವ ಕೊಡುತಿಹಳು ॥೩॥ ಉತ್ಥಾನದ್ವಾದಶಿ ದಿವಸದಲಿ ಕೃಷ್ಣಾ । ಉತ್ತಮ ತುಳಸಿಗೆ ವಿವಾಹವ ॥ ಚಿತ್ತ ನಿರ್ಮಲರಾಗಿ ಮಾಡಿದವರಿಗೆ । ಉತ್ತಮ ಗತಿ ಈವ ಪುರಂದರವಿಠಲ ॥೪॥

ಅನೇನ ಭಗವನ್ನಾಮಸಂಕೀರ್ತನೇನ ಭಗವಾನ್ ಮಾಸನಿಯಾಮಕ ಕಾರ್ತಿಕದಾಮೋದರಾತ್ಮಕ ಶ್ರೀಮಧ್ವಪತಿಃ ಶ್ರೀಗೋಪಾಲಕೃಷ್ಣಃ ಪ್ರೀಯತಾಮ್ ॥ ಶ್ರೀಕೃಷ್ಣಾರ್ಪಣಮಸ್ತು ॥

******

# ಕೇಶವಾದಿ ನಾಮಗಳು

ಈಶ ನಿನ್ನ ಚರಣ ಭಜನೆ ಆಶೆಯಿಂದ ಮಾಡುವೆನು
ದೋಷರಾಶಿ ನಾಶಮಾಡು ಶ್ರೀಶಕೇಶವ ||ಪಲ್ಲ||

ಶರಣು ಹೊಕ್ಕೆನಯ್ಯ ಎನ್ನ ಮರಣ ಸಮಯದಲ್ಲಿ ನಿನ್ನ
ಚರಣ ಸ್ಮರಣೆ ಕರುಣಿಸಯ್ಯ ನಾರಾಯಣಾ ||೧||

ಶೋಧಿಸೆನ್ನ ಭವದ ಕಲುಷ ಬೋಧಿಸಯ್ಯ ಜ್ಞಾನವೆನಗೆ
ಬಾಧಿಸುವ ಯಮನ ಬಾಧೆ ಬಿಡಿಸು ಮಾಧವ ||೨||

ಹಿಂದನೇಕಯೋನಿಗಳಲಿ ಬಂದು ಬಂದು ನೊಂದೆ ನಾನು
ಇಂದು ಭವದ ಬಂಧ ಬಿಡಿಸೋ ತಂದೆ ಗೋವಿಂದ ||೩||

ಭ್ರಷ್ಟನೆನಿಸ ಬೇಡ ಕೃಷ್ಣ ಇಷ್ಟು ಮಾತ್ರ ಬೇಡಿಕೊಂಬೆ
ಶಿಷ್ಟರೊಳಗೆ ಇಟ್ಟು ಕಷ್ಟ ಬಿಡಿಸು ವಿಷ್ಣುವೇ ||೪||

ಮದನನಯ್ಯ ನಿನ್ನ ಮಹಿಮೆ ವದನದಲ್ಲಿ ನುಡಿಯುವಂತೆ
ಹೃದಯದಲ್ಲಿ ಹುದುಗಿಸಯ್ಯ ಮಧುಸೂದನ ||೫||

ಕವಿದುಕೊಂಡು ಇರುವ ಪಾಪ ಸವೆದು ಪೋಗುವಂತೆ ಮಾಡಿ
ಭವದ (ಜವನ)ಬಾಧೆಯನ್ನು ಬಿಡಿಸೊ ಶ್ರೀತ್ರಿವಿಕ್ರಮ ||೬||

ಕಾಮಜನಕ ನಿನ್ನ ನಾಮ ಪ್ರೇಮದಿಂದ ಪಾಡುವಂಥ
ನೇಮವೆನಗೆ ಪಾಲಿಸಯ್ಯ ಸ್ವಾಮಿ ವಾಮನ ||೭||

ಮೊದಲು ನಿನ್ನ ಪಾದ ಪೂಜೆ ಒದಗುವಂತೆ ಮಾಡೊ ಎನ್ನ
ಹೃದಯದೊಳಗೆ ಸದನ ಮಾಡೊ ಮುದದಿ ಶ್ರೀಧರ ||೮||

ಹುಸಿಯನಾಡಿ ಹೊಟ್ಟೆ ಹೊರೆವ ವಿಷಯದಲ್ಲಿ ರಸಿಕನೆಂದು
ಹುಸಿಗೆ ಹಾಕದಿರೋ ಎನ್ನ ಹೃಷೀಕೇಶನೆ ||೯||

ಬಿದ್ದು ಭವದನೇಕ ಜನುಮ ಬದ್ಧನಾಗಿ ಕಲುಷದಿಂದ
ಗೆದ್ದು ಪೋಪ ಬುದ್ಧಿ ತೋರೊ ಪದ್ಮನಾಭನೇ ||೧೦||

ಕಾಮಕ್ರೋಧ ಬಿಡಿಸಿ ನಿನ್ನ ನಾಮ ಜಿಹ್ವೆಯೊಳಗೆ ನುಡಿಸೋ
ಶ್ರೀ ಮಹಾನುಭಾವನಾದ ದಾಮೋದರ ||೧೧||

ಪಂಕಜಾಕ್ಷ ನೀನು ಎನ್ನ ಮಂಕುಬುದ್ಧಿಯನ್ನು ಬಿಡಿಸಿ
ಕಿಂಕರನ್ನ ಮಾಡಿಕೊಳ್ಳೊ ಸಂಕರ್ಷಣ ||೧೨||

ಏಸು ಜನ್ಮ ಬಂದರೇನು ದಾಸನಲ್ಲವೇನು ನಾನು
ಘಾಸಿ ಮಾಡದಿರು ಇನ್ನು ವಾಸುದೇವನೇ ||೧೩||

ಬುದ್ಧಿ ಶೂನ್ಯನಾಗಿ ಎನ್ನ ಬದ್ಧಕಾಯ ಕುಹಕ ಮನವ
ತಿದ್ದಿ ಹೃದಯ ಶುದ್ಧ ಮಾಡೋ ಪ್ರದ್ಯುಮ್ನನೇ ||೧೪||

ಜನನಿ ಜನಕ ನೀನೆಯೆಂದು ನೆನೆವೆನಯ್ಯ ದೀನ ಬಂಧು
ಎನಗೆ ಮುಕ್ತಿ ಪಾಲಿಸಿಂದು ಅನಿರುದ್ಧನೇ ||೧೫||

ಹರುಷದಿಂದ ನಿನ್ನ ನಾಮ ಸ್ಮರಿಸುವಂತೆ ಮಾಡು ಕ್ಷೇಮ
ಇರಿಸು ಚರಣದಲ್ಲಿ ಪ್ರೇಮ ಪುರುಷೋತ್ತಮ ||೧೬||

ಸಾಧುಸಂಗ ಕೊಟ್ಟು ನಿನ್ನ ಪಾದ ಭಜನೆ ಇತ್ತು ಎನ್ನ
ಭೇದ ಮಾಡಿ ನೋಡದಿರು ಹೇ ಅಧೋಕ್ಷಜ ||೧೭||

ಚಾರು ಚರಣ ತೋರಿ ಎನಗೆ ಪಾರುಗಾಣಿಸಯ್ಯ ಕೊನೆಗೆ
ಭಾರ ಹಾಕಿರುವೆ ನಿನಗೆ ನಾರಸಿಂಹನೇ ||೧೮||

ಸಂಚಿತಾದಿ ಪಾಪಗಳು ಕಿಂಚಿತಾದಿ ಪೀಡೆಗಳು
ಮುಂಚಿತಾಗಿ ಕಳೆಯಬೇಕೊ ಸ್ವಾಮಿ ಅಚ್ಯುತ ||೧೯||

ಜ್ಞಾನ ಭಕುತಿ ಕೊಟ್ಟು ನಿನ್ನ ಧ್ಯಾನದಲ್ಲಿ ನೆಟ್ಟು ಸದಾ
ಹೀನ ಬುದ್ಧಿ ಬಿಡಿಸೊ ಮುನ್ನ ಶ್ರೀ ಜನಾರ್ದನ ||೨೦||

ಜಪತಪಾನುಷ್ಠಾನವಿಲ್ಲ ಕುಪಥಗಾಮಿಯಾದ ಎನ್ನ
ಕೃಪೆಯ ಮಾಡಿ ಕ್ಷಮಿಸಬೇಕು ಹೇ ಉಪೇಂದ್ರನೇ ||೨೧||

ಮೊರೆಯ ಇಡುವೆನಯ್ಯ ನಿನಗೆ ಶರಧಿಶಯನ ಶುಭಮತಿಯ
ಇರಿಸೋ ಭಕ್ತರೊಳು ಪರಮ ಪುರುಷ ಶ್ರೀಹರೇ ||೨೨||

ಪುಟ್ಟಿಸಲೇ ಬೇಡ ಇನ್ನು ಪುಟ್ಟಿಸಿದಕೆ ಪಾಲಿಸಿನ್ನು
ಇಷ್ಟು ಮಾತ್ರ ಬೇಡಿಕೊಂಬೆ ಶ್ರೀ ಕೃಷ್ಣನೇ ||೨೩||

ಸತ್ಯವಾದ ನಾಮಗಳನು ನಿತ್ಯದಲಿ ಪಠಿಸುವರಿಗೆ
ಅರ್ಥಿಯಿಂದ ಸಲಹುತಿರುವ ಕರ್ತೃ ಕೇಶವ ||೨೪||

ಮರೆಯದಲೆ ಹರಿಯ ನಾಮ ಬರೆದು ಓದಿ ಪೇಳ್ದವರಿಗೆ
ಕರೆದು ಮುಕ್ತಿ ಕೊಡುವ ನೆಲೆಯಾದಿಕೇಶವ ||೨೫||

* * * * * *

# ಕನ್ನಡ ಲಘು ವಾಯುಸ್ತುತಿ

ಶ್ರೀಮದ್ವಿಷ್ಣ್ವಾಜ್ಞದಿಂದ ಜನಿಸಿ ಪವನನು ಕೇಸರೀ ಕ್ಷೇತ್ರದಲ್ಲಿ
ಕಂಜಾಕ್ಷೀ ಸೀತೆಗಾಗಿ ಲವಣಜಲಧಿಯಂ ಲಂಘಿಸಿ ಲಂಕೆಯಲ್ಲಿ ।
ಇದ್ದಂಥಾ ರಾವಣನ್ನು ರಘುಪನ ಕರದಿ ನಿಂಗಿಸಿ ಭೂಮಿಯಿಂದ
ಕೂಡಿದ್ದಾ ರಾಘವನ್ನು ಭಜಿಸಿ ಮೆರೆದಿ ಕಿಂಪೂರುಷಾ ಖಂಡದಲ್ಲಿ ॥೧॥

ಆ ವಾಯು ಭೀಮನಾಗಿ ಸುರವರ ಬಲದಿಂ ಕೋಬ್ಬಿದಾ ಮಾಗದನ್ನು
ಕಿರ್ಮೀರರಂ ಕೀಚಕನ್ನು ಬಕಮುಖಖಲರಂ ದುಷ್ಟದುರ್ಯೋಧನನ್ನು ।
ಕೊಂದು ರಾಜಾಶ್ವಮೇಧ ಪ್ರಮುಖಮುಖಗಳಂ ಮಾಡಿ ಕೃಷ್ಣಾರ್ಪಣೆಂದು
ರಾಜಾಧೀರಾಜನಾಗಿ ಸುಜನರಪತಿಯು ಮೆರದನು ಸಾಧು ಬಂಧು ॥೨॥

ಪ್ರಾಗ್ ಜನ್ಮದ್ವೇಷದಿಂದ ಕಲಿಯಲಿ ಮಣಿಮಾನ್ ಸಂಕರಾಚಾರ್ಯನಾಗಿ
ಬ್ರಹ್ಮಾಹಂ ನಿರ್ಗುಣೋಹಂ ವಿತಥ ವಚನದಿಂ ಎಲ್ಲರಂ ಕೆಡಿಸಲಾಗಿ।
ಅಜ್ಞಾನಾಖ್ಯಾನದಿಂದ ಸುಜನರ ಮತಿಯು ಮ್ಲಾನವಂ ಪೊಂದಿರಲ್ಲು
ಶ್ರೀಶಾಜ್ಞಾ ಶಿರದಿ ವಹಿಸಿ ಕುರುಕುಲ ಪತಿಯೂ ಆದನೂ ಮಧ್ವಸೂರ್ಯಾ॥೩॥

ಸರ್ವಜ್ಞ ಶ್ರೀಶನೇನೇ ವಿಧಿಭವಮುಖರು ಶ್ರೀಹರೀ ದಾಸರೇನೇ
ಸತ್ಯೇವೇ ಈ ಜಗತ್ತು ಜನವು ತ್ರಿವಿಧವು ನಿತ್ಯ ಪಂಚಪ್ರಭೇದ ।
ಈಶಾಧೀನೇವೇ ಸರ್ವಶ್ರುತಿಗಿದನುಗುಣಾ ಅಂದದೇವೇ ಪ್ರಮಾಣಾ
ಹೀಗೆಂದು ಮಧ್ವಸೂರ್ಯ ತಿಳಿಸಿ ಸುಜನಕೆ ಆದನು ದಿವ್ಯಮೋದಾ ॥೪॥

ಕೇಳೆಂದು ಮಾಯಿವಾದೀ ಸಕಲಸುರಪನು ಎಂದಿಗೂ ಅಲ್ಪಜ್ಞನಲ್ಲಾ
ಜಿಜ್ಞಾಸ್ಯ ಬ್ರಹ್ಮನಾರಾಯಣ ಸಕಲಜಗತ್ಪರಿಮಿತಿಯನ್ನು ಬಲ್ಲ ।
ನೀನರಿಯೋ ನಿನ್ನ ನಾರಿ ಹಗಲು ಇರುಳಲಿ ಜಾರವಾಮಾಡುವೋದು
ಬ್ರಹ್ಮಾಹಂ ನಿರ್ಗುಣೆಂಬೋ ವಿತಥ ವಚನವು ಹ್ಯಾಂಗ ನೀ ಆಡವೋದು॥೫॥

ಮಾಯಾವಾದಿಗೆ ಮಾನಹೀನಜನಕೆ ಶುದ್ಧಿಲ್ಲದಾ ನಾಯಿಗೆ
ಮಾಯೀ ಸಂಕರಗೆ ಸಮೀರನಗದಾ ಪೆಟ್ಟಿಂದಲೇ ಮುಕ್ತಿಯು ।
ನಿತ್ಯಂಧಂತಮ ಆಹುದೆಂದು ತಿಳಿದು ಅಜ್ಞಾನವಂ ವರ್ಜಿಸಿ
ಶ್ರೀಮುದ್ರಾಸಹ ಗೋಪೀಚಂದನವನು ದೇಹಂಗಳಲ್ಯರ್ಚಿಸಿ ॥೬॥

॥ಇತಿ ಶ್ರೀವಾದಿರಾಜವಿರಚಿತ ಕನ್ನಡಲಘುವಾಯುಸ್ತುತಿಃ ಸಮಾಪ್ತಾ॥

## ಮಧ್ವಮತಸಂಗ್ರಹಃ

ಶ್ರೀಮನ್ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್ತತ್ತ್ವತೋ
ಭೇದೋ ಜೀವಗಣಾ ಹರೇರನುಚರಾಃ ನೀಚೋಚ್ಚಭಾವಂ ಗತಾಃ ।
ಮುಕ್ತಿರ್ನೈಜಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಂ
ಹ್ಯಕ್ಷಾದಿತ್ರಿತಯಂ ಪ್ರಮಾಣಮಖಿಲಾಮ್ನಾಯೈಕವೇದ್ಯೋ ಹರಿಃ ॥

ಶ್ರೀಮಧ್ವಮತದಲ್ಲಿ ಶ್ರೀಮನ್ನಾರಾಯಣನೇ ಸರ್ವೋತ್ತಮ, ಸ್ವತಂತ್ರ ಅಸ್ವತಂತ್ರಾತ್ಮಕವಾದ ಈ ಜಗತ್ತು ಯಥಾರ್ಥವಾದದ್ದು, ಜೀವ-ಜೀವರಿಗೂ, ಜೀವೇಶರಿಗೂ, ಜಡ-ಜಡಗಳಿಗೂ, ಜಡೇಶರಿಗೂ, ಜೀವ-ಜಡಗಳಿಗೂ ಯಾವಾಗಲೂ ಪರಸ್ಪರ ಭೇದವಿದೆ. ಲಕ್ಷ್ಮೀಯೂ ಬ್ರಹ್ಮಾದಿ ಜೀವರಾಶಿಗಳು ತಾರತಮ್ಯೋಪೇತರಾಗಿ ಶ್ರೀಪರಮಾತ್ಮನ ಅಧೀನರಾಗಿರುತ್ತಾರೆ. ನಿರ್ದುಷ್ಟವಾದ ನಿತ್ಯಾನಂದದ ಅನುಭವವೇ ಮೋಕ್ಷ; ಪರಮಾತ್ಮೈಕವಿಷಯವಾದ ನಿರ್ಮಲವಾದ ಪ್ರೇಮಪ್ರವಾಹವೇ ಅಂಥಾ ಮೋಕ್ಷಕ್ಕೆ ಮಾರ್ಗ. ಪ್ರಮಾಣವೆಂದರೆ ಪ್ರತ್ಯಕ್ಷ, ಅನುಮಾನ, ಆಗಮ ; ಶ್ರೀಮನ್ನಾರಾಯಣನು ಆಗಮ (ವೇದ)ದಿಂದಲೇ ಮುಖ್ಯವಾಗಿ ತಿಳಿಯತಕ್ಕವನು- ಈ ರೀತಿ ಸಿದ್ಧಾಂತ ಮಾಡಲ್ಪಟ್ಟಿದೆ.

## ಅಥ ಗೀತಾಮೃತಮ್

ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।
ಅಭ್ಯುತ್ಥಾನಮಧರ್ಮಸ್ಯ ತದಾಽಽತ್ಮಾನಂ ಸೃಜಾಮ್ಯಹಮ್ ॥

ಅರ್ಜುನ! ಧರ್ಮವು ಕ್ಷೀಣವಾಗಿ ಅಧರ್ಮವೇ ಎಲ್ಲೆಡೆಯೂ ತಲೆ ಎತ್ತಿದಾಗ ನಾನು ಪ್ರಕಟನಾಗುತ್ತೇನೆ. ಇದು ಸಾರ್ವಕಾಲಿಕ ಸತ್ಯ.

ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್ ।
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥

ಅರ್ಜುನ! ನನ್ನ ಅವತಾರವು, ಸುಜನರ ಹಿತಕ್ಕಾಗಿ, ದುರ್ಜನರ ದಮನಕ್ಕಾಗಿ; ಧರ್ಮದ ಸ್ಥಾಪನೆಗಾಗಿಯೂ ಆಗಿದೆ. ಈ ಮೂರು ಕಾರ್ಯಕ್ಕಾಗಿ ಬಾರಿಬಾರಿಗೂ ಬರುತ್ತೇನೆ.

ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।
ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ॥

ಸುಖಭೋಗವನ್ನು ಬಯಸದೆ ಸರ್ವಾತ್ಮನಾ ನನ್ನನ್ನೇ ಚಿಂತಿಸುವ ಸಾಧಕರ ಯೋಗಕ್ಷೇಮವನ್ನು ನಾನೇ ಭರಿಸುತ್ತೇನೆ. ತ್ರಿಕರಣಪೂಜೆಯಿಂದ ಸಂತುಷ್ಟನಾಗಿ ಮೋಕ್ಷವನ್ನೂ ನೀಡುತ್ತೇನೆ.

**ದೇವ-ದ್ವಿಜ-ಗುರು-ಪ್ರಾಜ್ಞಪೂಜನಂ ಶೌಚಮಾರ್ಜವಮ್ ।**
**ಬ್ರಹ್ಮಚರ್ಯಮಹಿಂಸಾ ಚ ಶಾರೀರಂ ತಪ ಉಚ್ಯತೇ ॥**

ದೇವತೆಗಳನ್ನು, ಸಂಸ್ಕಾರವಂತರನ್ನು, ಗುರುಗಳನ್ನು, ಜ್ಞಾನಿಗಳನ್ನು ಪೂಜಿಸುವುದು; ಬಾಹ್ಯಾಂತರಶುದ್ಧಿ, ನೇರ ಕೃತಿ, ಬ್ರಹ್ಮಚರ್ಯ, ಅಹಿಂಸೆ, ಇವುಗಳು ಶಾರೀರಿಕ ತಪಸ್ಸು ಎನಿಸುತ್ತವೆ.

**ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್ ।**
**ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ ॥**

ಸತ್ಯವಾದ, ಪ್ರಿಯವಾದ, ಹಿತವಾದ, ಉದ್ವೇಗವಿಲ್ಲದ ನುಡಿ, ವೇದಾಧ್ಯಯನ ಇವುಗಳು ವಾಗಿಂದ್ರಿಯದ ತಪಸ್ಸೆನಿಸುವುದು.

**ಮನಃಪ್ರಸಾದಃ ಸೌಮ್ಯತ್ವಂ ಮೌನಮಿಂದ್ರಿಯನಿಗ್ರಹಃ ।**
**ಭಾವಸಂಶುದ್ಧಿರಿತ್ಯೇತತ್ ತಪೋ ಮಾನಸಮುಚ್ಯತೇ ॥**

ಮನೋನಿಗ್ರಹ, ಅಕ್ರೌರ್ಯ, ನಿತ್ಯ ತತ್ತ್ವಚಿಂತನೆ, ನಿತ್ಯ ಹರಿಭಕ್ತಿ, ನಿತ್ಯವಿರಕ್ತಿ ಇವುಗಳು ಮಾನಸಿಕವಾಗಿ ನಡೆವ ತಪಸ್ಸೆನಿಸುತ್ತವೆ.

**ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಮ್ ।**
**ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ॥**

ಯಾರಿಂದ ಎಲ್ಲರ ಪ್ರವೃತ್ತಿಯೋ, ಯಾರು ಎಲ್ಲವನ್ನೂ ವ್ಯಾಪಿಸಿದ್ದಾನೋ ಅವನನ್ನು ತಮಗೆ ವಿಹಿತವಾದ ಕರ್ತವ್ಯಗಳಿಂದ ಪೂಜಿಸಿದರೆ ಮುಕ್ತರಾಗುತ್ತಾರೆ.

**ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।**
**ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥**

ಪರಿಮಳವುಳ್ಳ ಪುಷ್ಪ, ವಿಹಿತವಾದ ಪತ್ರ, ಫಲ, ಶುದ್ಧ ನೀರು ಇವುಗಳನ್ನೇ ಯಾರು ಭಕ್ತಿಯಿಂದ ನೀಡುತ್ತಾರೋ ಅವುಗಳನ್ನು, ವಿರಕ್ತ ಭಕ್ತನ ಭಕ್ತಿಯನ್ನು ಕಂಡು ಹರಿಯು ಸ್ವೀಕರಿಸುವನು.

**ಯತ್ಕರೋಷಿ ಯದಶ್ನಾಸಿ ಯಜ್ಜುಹೋಸಿ ದದಾಸಿ ಯತ್ ।**
**ಯತ್ತಪಸ್ಯಸಿ ಕೌಂತೇಯ ತತ್ ಕುರುಷ್ವ ಮದರ್ಪಣಮ್॥**

ಅರ್ಜುನ! ನೀನು ಮಾಡಿದ ವಿಹಿತ ಕರ್ಮ, ವಿಹಿತ ಭೋಜನ, ವಿಹಿತ ದಾನ, ವಿಹಿತ ತಪಸ್ಸು ಇವುಗಳೆಲ್ಲವನ್ನೂ ನನಗೇ ಅರ್ಪಿಸು.

**ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ।**
**ತತ್ರ ಶ್ರೀರ್ವಿಜಯೋ ಭೂತಿರ್ಧ್ರುವಾ ನೀತಿರ್ಮತಿರ್ಮಮ॥**

ಪರಮಪುರುಷನಾದ ಹರಿ ಇರುವಲ್ಲಿ, ಧನುರ್ಧಾರಿಯಾದ ವಿಜಯನಿರುವಲ್ಲಿ ರಾಜ್ಯಲಕ್ಷ್ಮೀ, ಸಂಪತ್ತು, ವಿಜಯ, ನ್ಯಾಯಗಳು ಸ್ಥಿರವಾಗಿರುತ್ತವೆ ಎಂದು ನನ್ನ ಮತ.

**॥ ಇತಿ ಗೀತಾಮೃತಮ್ ॥**

******

# ವಿವಿಧದಾನಮಂತ್ರಗಳು

[ಆಯಾ ಪದಾರ್ಥವನ್ನು ದಾನಮಾಡುವಾಗ ಈ ಕೆಳಗೆ ಕಾಣಿಸಿರುವ ಮಂತ್ರಗಳ ಪೈಕಿ ಆಯಾ ದಾನದ್ದೇ ಸಂಬಂಧಪಟ್ಟ ಮಂತ್ರವನ್ನು ಉಚ್ಚರಿಸಿ ದಾನಮಾಡಬೇಕು.]

### ಸುವರ್ಣದಾನಮಂತ್ರ

**ಹಿರಣ್ಯಗರ್ಭಗರ್ಭಸ್ಥಂ ಹೇಮಬೀಜಂ ವಿಭಾವಸೋಃ ।**
**ಅನಂತಪುಣ್ಯಫಲದಮತಃ ಶಾಂತಿಂ ಪ್ರಯಚ್ಛ ಮೇ ॥**

### ದಧಿದಾನಮಂತ್ರ

**ಕ್ಷೀರಾಮ್ಲೇನ ಸಮುದ್ಭೂತಂ ದೇವರ್ಷಿಪಿತೃತೃಪ್ತಿದಮ್ ।**
**ದಧಿ ಸ್ಯಾನ್ಮೇಽಮೃತಂ ನಿತ್ಯಮತಃ ಶಾಂತಿಂ ಪ್ರಯಚ್ಛ ಮೇ ॥**

### ಕ್ಷೀರದಾನಮಂತ್ರ

**ಶಿಶೂನಾಂ ಜೀವನಂ ಕ್ಷೀರಂ ಪಿತೃದೇವಪ್ರಿಯಂ ಸದಾ ।**
**ಕಾಂತಿದಂ ಪುಷ್ಟಿದಂ ನಿತ್ಯಮತಃ ಶಾಂತಿಂ ಪ್ರಯಚ್ಛ ಮೇ ॥**

### ಘೃತದಾನಮಂತ್ರ

**ಕಾಮಧೇನೋಃ ಸಮುದ್ಭೂತಂ ಸರ್ವಋತುಷು ಸಂಸ್ಥಿತಮ್ ।**
**ದೇವಾನಾಮಾಜ್ಯಮಾಹಾರಮತಃ ಶಾಂತಿಂ ಪ್ರಯಚ್ಛ ಮೇ ॥**

## ಫಲದಾನಮಂತ್ರ

ಮನೋಹರಾಣಿ ರಮ್ಯಾಣಿ ನಿತ್ಯಂ ಸ್ವಾದುಕರಾಣಿ ಚ ।
ಫಲಾನಾಂ ಸಂಪ್ರದಾನೇನ ಮಮ ಸಂತು ಸುರಾಃ ಪ್ರಿಯಾಃ ॥
ಫಲಾನಿ ಮಧುರಾಣೀಹ ಮುನಿದೇವಪ್ರಿಯಾಣಿ ಚ ।
ತಸ್ಮಾತ್ತೇಷಾಂ ಪ್ರದಾನೇನ ಸಫಲಾ ಮೇ ಮನೋರಥಾಃ ॥

## ಗೋಧೂಮದಾನಮಂತ್ರ

ಧಾನ್ಯಂ ಚೂಡಾಮಣೀ ಜಂಬೂದ್ವೀಪೇ ಗೋಧೂಮಸಂಜ್ಞಿತಃ ।
ಗಂಧರ್ವಧನದಂ ಸೌಮ್ಯಮತಃ ಶಾಂತಿಂ ಪ್ರಯಚ್ಛ ಮೇ ॥

## ಘಂಟಾದಾನಮಂತ್ರ

ಘಂಟಾ ದೇವಪ್ರಿಯಾ ನಿತ್ಯಂ ದೈತ್ಯತ್ರಾಸಕರೀ ಸದಾ ।
ಸಂಪ್ರದಾನೇನ ಚೈತಸ್ಯಾ ವಿಜಯೋಽಸ್ತು ಸದಾ ಮಮ ॥

## ತಿಲದಾನಮಂತ್ರ

ತಿಲಾ ಪಾಪಹರಾ ನಿತ್ಯಂ ವಿಷ್ಣೋರ್ದೇಹಸಮುದ್ಭವಃ ।
ತಿಲದಾನಾಚ್ಚ ಸರ್ವಂ ಮೇ ಪಾಪನಾಶಕರಾ ಭವ ॥

## ದರ್ಪಣದಾನಮಂತ್ರ

ದರ್ಶನೇನ ತ್ವಮಾದರ್ಶಂ ನೃಣಾಂ ಮಂಗಲದಾಯಕಃ ।
ಸರ್ವಸೌಭಾಗ್ಯಸತ್ಕೀರ್ತಿನಿರ್ಮಲಂ ಜ್ಞಾನಮಸ್ತು ಮೇ ॥

## ಉಪಾನಹದಾನಮಂತ್ರ

ಉಪಾನಹೌ ಪ್ರದಾಸ್ಯಾಮಿ ಕಂಟಕಾದಿನಿವಾರಣೇ ।
ಸರ್ವಮಾರ್ಗೇಷು ಸುಖದೇ ಅತಃ ಶಾಂತಿಂ ಪ್ರಯಚ್ಛ ಮೇ ॥

## ಅಧಿಕಮಾಸೇ ಅಪೂಪದಾನಸಂಕಲ್ಪಃ

ಆಚಮ್ಯ, ದೇಶಕಾಲೌ ಸಂಕೀರ್ತ್ಯ, ಏವಂಗುಣವಿಶೇಷಣವಿಶಿಷ್ಟಾಯಾಂ ಶುಭತಿಥೌ ತ್ರಯಸ್ತ್ರಿಂಶತ್ಕೋಟಿದೇವತಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಸಹಸ್ರಾಂಶು ಶ್ರೀವಿಷ್ಣುರೂಪೀಪುರುಷೋತ್ತಮಪ್ರೇರಣಯಾ ಪುರುಷೋತ್ತಮ ಪ್ರೀತಿದ್ವಾರಾ ........... (ಅಮುಕ) ಗೋತ್ರಸ್ಯ ............(ಅಮುಕ) ಶರ್ಮಣಃ ಮಮ ನಿಖಿಲಪಾಪಕ್ಷಯಪೂರ್ವಕಪುತ್ರಪೌತ್ರಯುತ ಧನಧಾನ್ಯಕ್ಷೇಮಸಮೃದ್ಧಿಲೋಕದ್ವಯಸುಖಹೇತುಭೂದಾನಫಲಪ್ರಾಪ್ತ್ಯೈ ಅಪೂಪಛಿದ್ರಸಮಸಂಖ್ಯಾವರ್ಷಸಹಸ್ರಾವಧಿ ಸ್ವರ್ಲೋಕನಿವಾಸಾದಿ

ಫಲಸಿದ್ಧ್ಯರ್ಥಂ ಮಲಮಾಸಪ್ರಯುಕ್ತತ್ರಯಸ್ತ್ರಿಂಶದಪೂಪದಾನಮಹಂ ಕರಿಷ್ಯೇ ತದಂಗಪುರುಷೋತ್ತಮಪೂಜಾಂ ಬ್ರಾಹ್ಮಣಪೂಜಾಂ (ಬ್ರಾಹ್ಮಣಭೋಜನಂ) ಚ ಕರಿಷ್ಯೇ ।

### ಪ್ರಾರ್ಥನಾಮಂತ್ರಃ

ವಿಷ್ಣುರೂಪೀ ಸಹಸ್ರಾಂಶುಃ ಸರ್ವಪಾಪಪ್ರಣಾಶನಃ ।
ಅಪೂಪಾನ್ನಪ್ರದಾನೇನ ಮಮ ಪಾಪಂ ವ್ಯಪೋಹತು ॥

ನಾರಾಯಣ ಜಗದ್ಬೀಜ ಭಾಸ್ಕರಪ್ರತಿರೂಪಕ ।
ವ್ರತೇನಾನೇನ ಪುತ್ರಾಂಶ್ಚ ಸಂಪದಂ ಚಾಪಿ ವರ್ಧಯ ॥

ಯಸ್ಯ ಹಸ್ತೇ ಗದಾಚಕ್ರೇ ಗರುಡೋ ಯಸ್ಯ ವಾಹನಃ ।
ಶಂಖಂ ಕರತಲೇ ಯಸ್ಯ ಸ ಮೇ ವಿಷ್ಣುಃ ಪ್ರಸೀದತು ॥

ಕಲಾಕಾಷ್ಠಾದಿರೂಪೇಣ ನಿಮೇಷಘಟಿಕಾದಿನಾ ।
ಯೋ ವಂಚಯತಿ ಭೂತಾನಿ ತಸ್ಮೈ ಕಾಲಾತ್ಮನೇ ನಮಃ ॥

ಕುರುಕ್ಷೇತ್ರಮಯಂ ದೇಶಃ ಕಾಲಃ ಪೂರ್ವೋ ದ್ವಿಜೋ ಹರಿಃ ।
ಪೃಥ್ವೀಸಮಮಿದಂ ದಾನಂ ಗೃಹಾಣ ಪುರುಷೋತ್ತಮ ।

ಮಲಾನಾಂ ಚ ವಿಶುದ್ಧ್ಯರ್ಥಂ ಪಾಪಪ್ರಶಮನಾಯ ಚ ॥
ಪುತ್ರಪೌತ್ರಾಭಿವೃದ್ಧ್ಯರ್ಥಂ ತವ ದಾಸ್ಯಾಮಿ ಭಾಸ್ಕರ ।

## ಅಪೂಪದಾನಕಾಲೇ ಚಿಂತ್ಯಭಗವದ್ರೂಪಾಣಿ

ವಿಷ್ಣುಂ ಜಿಷ್ಣುಂ ಮಹಾವಿಷ್ಣುಂ ಹರಿಂ ಕೃಷ್ಣಮಧೋಕ್ಷಜಮ್ ।
ಕೇಶವಂ ಮಾಧವಂ ರಾಮಮಚ್ಯುತಂ ಪುರುಷೋತ್ತಮಮ್ ॥

ಗೋವಿಂದಂ ವಾಮನಂ ಶ್ರೀಶಂ ಶ್ರೀಕಂಠಂ ವಿಶ್ವಸಾಕ್ಷಿಣಮ್ ।
ನಾರಾಯಣಂ ಮಧುರಿಪುಮನಿರುದ್ಧಂ ತ್ರಿವಿಕ್ರಮಮ್ ॥

ವಾಸುದೇವಂ ಜಗದ್ಯೋನಿಮನಂತಂ ಶೇಷಶಾಯಿನಮ್ ।
ಸಂಕರ್ಷಣಂ ಚ ಪ್ರದ್ಯುಮ್ನಂ ದೈತ್ಯಾರಿಂ ವಿಶ್ವತೋಮುಖಮ್ ॥

ಜನಾರ್ದನಂ ಧರಾವಾಸಂ ದಾಮೋದರಮಘಾರ್ದನಮ್ ।
ಶ್ರೀಪತಿಂ ಚ ತ್ರಯಸ್ತ್ರಿಂಶದುದ್ದಿಶ್ಯ ಪ್ರತಿನಾಮಭಿಃ ।

ಮಂತ್ರೈರೇತೈಶ್ಚ ಯೋ ದದ್ಯಾತ್ ತ್ರಯಸ್ತ್ರಿಂಶದಪೂಪಕಮ್ ।
ಪ್ರಾಪ್ನೋತಿ ವಿಪುಲಾಂ ಲಕ್ಷ್ಮೀಂ ಪುತ್ರಪೌತ್ರಾದಿಸಂತತಿಮ್ ॥

ಇದಂ ಸೋಪಸ್ಕರಂ ತ್ರಯಸ್ತ್ರಿಂಶದಪೂಪದಾನಂ ಸದಕ್ಷಿಣಾಕಂ ಸತಾಂಬೂಲಂ

ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಪುರುಷೋತ್ತಮಪ್ರೀತಿಂ ಕಾಮಯಮಾನಃ ತುಭ್ಯಮಹಂ ಸಂಪ್ರದದೇ ನ ಮಮ । ಅನೇನ ದಾನೇನ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀಪುರುಷೋತ್ತಮಃ ಪ್ರೀಯತಾಂ ಸುಪ್ರೀತೋ ವರದೋ ಭವತು

॥ಶ್ರೀ ಕೃಷ್ಣಾರ್ಪಣಮಸ್ತು॥

******

## ಅಷ್ಟಕುಲನಾಗಗಳು

**ಸರ್ಪೋಽನಂತಸ್ತಥಾ ಶೇಷಃ ಕಪಿಲೋ ನಾಗ ಏವ ಚ ।**
**ಗುಳಿಕಃ ಶಂಖಪಾಲಶ್ಚ ಭೂಧರೋಽಷ್ಟೌ ಹಿ ವಂಶಪಾಃ ॥** [೯ನೇ–ವಾಸುಕೀ]

******

## ಕರ್ಮಸಿದ್ಧಾಂತ

೧. ಅಷ್ಟವಸುಗಳ ಪೈಕಿ ಒಬ್ಬರಾದ ದ್ಯುನಾಮಕ ವಸುವು ವರಾಂಗಿ ಎಂಬ ತಮ್ಮ ಪತ್ನಿಯ ಮಾತಿಗೆ ವಶರಾಗಿ, ವಸಿಷ್ಠ ಋಷಿಗಳಲ್ಲಿದ್ದ ಕಾಮಧೇನುವಂಶದ ಹಸುವಿನ ಹಾಲನ್ನು (ಅಮೃತವನ್ನು) ಕಳ್ಳತನದಿಂದ ಕರೆಯುವುದಕ್ಕೆ ಹೋಗಿದ್ದಾಗ ಶಾಪ ಹೊಂದಿ, ಭೂಮಿಯಲ್ಲಿ ಶಂತನುವಿನ ಮಗನಾಗಿ ದೇವವ್ರತ ಎಂಬ ಹೆಸರನ್ನು ಹೊಂದಿ ಮುಂದೆ 'ಭೀಷ್ಮ'ರೆಂಬ ಹೆಸರನ್ನು ಪಡೆದು ಅನೇಕ ಶತಮಾನಗಳ ಕಾಲ (೮೦೦ ವರ್ಷ) ಇರಬೇಕಾಯಿತು. ಅನಂತರ ಶ್ರೀಕೃಷ್ಣನ ಅನುಗ್ರಹದಿಂದ ತಮ್ಮ ಮೂಲರೂಪವನ್ನು ಹೊಂದಿದರು.

೨. ಯಮದೇವರು ಅಣಿಮಾಂಡವ್ಯರಿಗೆ ಶೂಲಪ್ರಾಪ್ತಿಯಾದ ಕಾಲದಲ್ಲಿ ಅವರು ಅದಕ್ಕೆ ಕಾರಣವನ್ನು ಕೇಳಿದಾಗ "ಬಾಲ್ಯದಲ್ಲಿ ಒಂದು ಕ್ರಿಮಿಗೆ ಮುಳ್ಳಿನಿಂದ ಚುಚ್ಚಿದ್ದರಿಂದ ಶೂಲಪ್ರಾಪ್ತಿ" ಎಂದು ಹೇಳಿದರು. ಋಷಿಗಳು ಹಿಂದಿನ ನೂರು ಜನ್ಮವನ್ನು ಶೋಧಿಸಿ ಕೊಂಡು, 'ಹಾಗೆ ನಡೆದಿಲ್ಲದಿದ್ದರೂ ಸುಳ್ಳು ಹೇಳಿದುದರಿಂದ ಶೂದ್ರನಾಗು' ಎಂದು ಶಾಪನೀಡಿದರು. ಅವರೇ ವಿದುರನಾಗಿ ಜನಿಸಿದ್ದು ಪ್ರಸಿದ್ಧಿ ಇದೆ.

೩. ಸುಮುಖನೆಂಬ ಬ್ರಹ್ಮದೇವರ ಸೇವಕನು ಪೂಜಾಕಾಲಕ್ಕೆ ಹೂವು ತಂದುಕೊಡುವುದಕ್ಕೆ ತಡಮಾಡಿದ್ದರಿಂದ ಶಪ್ತನಾಗಿ ದೈತ್ಯಕುಲದಲ್ಲಿ ಪ್ರಹ್ಲಾದನಾಗಿ ಜನಿಸಬೇಕಾಯಿತು.

೪. ನೃಗ ಚಕ್ರವರ್ತಿಯು ನಿತ್ಯ ಗೋದಾನ ಮಾಡುವ ಸಂದರ್ಭದಲ್ಲಿ; ಒಂದು ಗೋವು ದಾನ ತೆಗೆದುಕೊಂಡ ಬ್ರಾಹ್ಮಣನನ್ನು ಬಿಟ್ಟು ಮಂದೆಗೆ ಬಂದು ಸೇರಿತು. ಆದರ 'ಜ್ಞಾನವಿಲ್ಲದ ಚಕ್ರವರ್ತಿಯು ಆ ಗೋವನ್ನು ಮರುದಿವಸ ಮತ್ತೊಬ್ಬ ಬ್ರಾಹ್ಮಣನಿಗೆ ದಾನಮಾಡಿದನು. ಅಜ್ಞಾನದಿಂದ ನಡೆದ ದತ್ತಾಪಹಾರದೋಷದಿಂದ ಅವನು ಕೃಕಲಾಸ [ಹೆಂಟೆಗೊದ್ದ]ನಾಗಬೇಕಾಯಿತು.

೫. ಸುದರ್ಶನೆಂಬ ವಿದ್ಯಾಧರನು ಬ್ರಹ್ಮಜ್ಞಾನಿಗಳಾದ ಋಷಿಗಳನ್ನು ಹಾಸ್ಯಮಾಡಿದುದರಿಂದ ಅಜಗರ (ಹೆಬ್ಬಾವು)ನಾಗಬೇಕಾಯಿತು.

೬. ಹಾಹಾ ಹೂಹೂ ಗಂಧರ್ವರು ಆನೆ, ಮೊಸಳೆ ರೂಪದಿಂದ ದೇವಳ ಋಷಿಗಳನ್ನು ಭಯಪಡಿಸಿದ್ದರಿಂದ ಸಾವಿರಾರು ವರ್ಷ ಆನೆ, ಮೊಸಳೆ ಜನ್ಮ ಅನುಭವಿಸಬೇಕಾಯಿತು.

೭. ಇಂದ್ರದ್ಯುಮ್ನಮಹಾರಾಜನು ದೇವರಪೂಜೆ ಮಾಡುತ್ತಿರುವಾಗ ಬಂದ ಅಗಸ್ತ್ಯ ಋಷಿಗಳಿಗೆ ಮರ್ಯಾದೆ ಮಾಡಲಿಲ್ಲ ಆದ್ದರಿಂದ ಆನೆ ಜನ್ಮ ಅನುಭವಿಸಬೇಕಾಯಿತು.

೮. ದಿಕ್ಪಾಲಕನಾದ ಕುಬೇರನ ಮಕ್ಕಳಾದ ನಲಕೂಬರ, ಮಣಿಗ್ರೀವರು ನಾರದರಿಗೆ ಅವಮಾನಕರವಾಗಿ ವರ್ತಿಸಿದ್ದರಿಂದ ಅರ್ಜುನವೃಕ್ಷಗಳಾಗಿ ಹುಟ್ಟಬೇಕಾಯಿತು.

೯. ಓರ್ವ ಬ್ರಾಹ್ಮಣಸ್ತ್ರೀಯು (ಬಾಳರಂಡಾ) ವ್ರತೋಪವಾಸಗಳಿಂದ ಬಹುಕಾಲ ಕಳೆದಿದ್ದರೂ ಮರಣಕಾಲದಲ್ಲಿ ಆಕೆಯನ್ನು ಜಗಲಿಯ ಮೇಲೆ ಮಲಗಿಸುವುದಕ್ಕೋಸ್ಕರ ಬ್ರಾಹ್ಮಣರು ಹಾಸಿಗೆ ಸಮೇತ ಆಕೆಯನ್ನು ತೆಗೆದುಕೊಂಡು ಹೋಗುತ್ತಿರುವಾಗ ಆಕೆಗೆ ಒಬ್ಬ ಪುರುಷನ ಕೈತಗಲಿದಾಗ ಪುರುಷಸ್ಪರ್ಶದಿಂದ ಎಂತಹ ಸುಖವಾಗುತ್ತದೆ ಎಂಬ ಭಾವನೆಯನ್ನು ಮನಸ್ಸಿಗೆ ತಂದುಕೊಂಡು ನಾಲ್ಕಾರು ಜನ ಪುರುಷರನ್ನು ನೋಡುತ್ತಾ ಮರಣ ಹೊಂದಿದುದರಿಂದ 'ಪಿಂಗಳ' ಎಂಬ ವೇಶ್ಯೆ ಜನ್ಮವನ್ನು ಅನುಭವಿಸಬೇಕಾಯಿತು.

೧೦. ಇಕ್ಷ್ವಾಕುಮಹಾರಾಜನು ಯಜ್ಞಮಾಡುತ್ತಾ ಪುಷ್ಕಳ ಅನ್ನದಾನ ಮಾಡುತ್ತಿದ್ದರೂ ನೀರನ್ನು ದಾನ ಮಾಡದ ಪ್ರಯುಕ್ತ ಹಲ್ಲಿಜನ್ಮವನ್ನು ಅನುಭವಿಸಬೇಕಾಯಿತು.

೧೧. ಒಬ್ಬ ಶೂದ್ರರಾಜನು ತನ್ನ ಕಡುಲೋಭಿತನದಿಂದ ಕ್ರಿಮಿಜನ್ಮವನ್ನು ಹೊಂದಿದನು. ದೇವರ ಭಕ್ತನಾದ ಆತನು ವೇದವ್ಯಾಸರ ಅನುಗ್ರಹದಿಂದ ಮುಂದಿನ ಜನ್ಮದಲ್ಲಿ ಬ್ರಾಹ್ಮಣನಾದನು.

೧೨. ಶಂಶೀಕನೆಂಬ ಕಾಶೀಪಟ್ಟಣದಲ್ಲಿ ಕಟ್ಟಿಗೆ ಮಾರುವ ಶೂದ್ರನು ಸೂರ್ಯಗ್ರಹಣಕಾಲದಲ್ಲಿ ತನ್ನ ಸರ್ವಸ್ವವನ್ನು (ಕೊಡಲಿ ಕಟ್ಟಿಗೆ ದ್ರವ್ಯವನ್ನು)

ಬ್ರಾಹ್ಮಣನಿಗೆ ದಾನಮಾಡಿದ ಪುಣ್ಯದಿಂದ ಕಪಿಲಯೆಂಬ ಬ್ರಾಹ್ಮಣನ ಮಗನಾಗಿ ಅವರ ತಂದೆ ಸಂಪಾದಿಸಿದ್ದ ಅಗಾಧವಾದ ದ್ರವ್ಯಕ್ಕೆ ಅಧಿಪತಿಯಾದನು.

೧೩. ಕಶ್ಯಪರು, ಮಗನಾದ ವರುಣನಿಗೆ ಬ್ರಹ್ಮದೇವರಿಂದ ಹೂಡಲ್ಪಟ್ಟ ಗೋವುಗಳನ್ನು ಅಪಹಾರಮಾಡಿದ್ದರಿಂದ 'ವಸುದೇವ' ಎಂಬ ಹೆಸರಿನಿಂದ ಯದುಕುಲದಲ್ಲಿ ಹುಟ್ಟಬೇಕಾಯಿತು.

೧೪. ಇಂದ್ರದೇವರು ಶುಷ್ಕತರ್ಕವನ್ನು ಹಿಡಿದು ಹೆಚ್ಚಿಗೆ ವಾದ ಮಾಡಿದ್ದರಿಂದ ನರಿಜನ್ಮ ಅನುಭವಿಸಬೇಕಾಯಿತು ಎಂದು ಅವರೇ ಹೇಳಿಕೊಂಡಿದ್ದಾರೆ.

೧೫. ಮುಚುಕುಂದ ಮಹಾರಾಜನು ಮುಂದಿನ ಜನ್ಮದಲ್ಲಿ ಬ್ರಾಹ್ಮಣಜನ್ಮ ಹೊಂದಿದರೆಂಬುದಕ್ಕೆ ಶ್ರೀಕೃಷ್ಣನ ವಚನವಿದೆ.

೧೬. ಋಷಭನಾಮಕ ಪರಮಾತ್ಮನ ಮಕ್ಕಳಾದ ಭರತ ಮಹಾರಾಜನು ರಾಜ್ಯಕೋಶಾದಿಗಳನ್ನು ತ್ಯಾಗಮಾಡಿ ತಪಸ್ಸಿಗಾಗಿ ಕಾಡಿಗೆ ಹೋದಾಗ ಅನಾಥವಾದ ಒಂದು ಜಿಂಕೆ ಮರಿಯನ್ನು ರಕ್ಷಿಸುವ ಯೋಗ ಒದಗಿತು. ಮರಣಕಾಲದಲ್ಲಿ ಅದನ್ನೇ ಚಿಂತಿಸುತ್ತಾ ದೇಹಬಿಟ್ಟದ್ದರಿಂದ ತಾವೇ ಜಿಂಕೆ ಜನ್ಮವನ್ನು ಕೇವಲ ಕೆಲವು ಕಾಲ ಅನುಭವಿಸಿ ನಂತರ ಅಂಗಿರಸ ಕುಲದಲ್ಲಿ ಬ್ರಾಹ್ಮಣನಾಗಿ ಜನಿಸಿದರು.

೧೭. ಧ್ರುವಮಹಾರಾಜನು ಹಿಂದಿನ ಜನ್ಮದಲ್ಲಿ ಒಬ್ಬ ಬ್ರಾಹ್ಮಣ ಕುಮಾರನಾಗಿದ್ದಾಗ ಆನೆಯಮೇಲೆ ಸವಾರಿ ಹೋಗುತ್ತಿರುವ ಓರ್ವ ರಾಜಕುಮಾರನನ್ನು ನೋಡಿ ತಾನು ಹಾಗೆಯೇ ಹೋಗಬೇಕೆಂದು ಆಸೆಯಿಂದ ಮರಣಹೊಂದಿ ಮುಂದೆ ಉತ್ತಾನಪಾದ ಎಂಬ ಮಹಾರಾಜನ ಕುಮಾರನಾಗಿ ಜನಿಸಿದನು.

೧೮. ಉಪಬರ್ಹಣ ಎಂಬ ಗಂಧರ್ವನು ಸ್ತ್ರೀಯರ ಮಧ್ಯದಲ್ಲಿ ಗಾನಮಾಡಿದ್ದರಿಂದ ಶೂದ್ರಕುಮಾರನಾಗಬೇಕಾಯಿತು. ಆಗ ಸಂನ್ಯಾಸಿಗಳ ಸೇವೆದೊರಕಿ ಅವರ ಉಪದೇಶದಿಂದ ಶ್ರೀಹರಿಯನ್ನು ಚಿಂತಿಸಿ ಮುಂದೆ ಬ್ರಹ್ಮದೇವರ ಮಗನಾಗಿ ನಾರದರೆನಿಸಿದರು.

೧೯. ದುಂದುಕಾರಿಯೆಂಬ ಬ್ರಾಹ್ಮಣಕುಮಾರನು ವೇಶ್ಯಗಾಮಿಯಾಗಿ ರಾಜಮಂದಿರಗಳಲ್ಲಿ ಕಳ್ಳತನವನ್ನು ಮಾಡುತ್ತಿದ್ದು ವೇಶ್ಯಾಸ್ತ್ರೀಯರಿಂದ ಹತನಾಗಿ ಪಿಶಾಚಜನ್ಮ ಹೊಂದಿದನು. ನಂತರ ತನ್ನ ಅಣ್ಣನಾದ ಗೋಕರ್ಣನು ಶ್ರೀಮದ್ಭಾಗವತಸಪ್ತಾಹ ಹೇಳಿದ್ದನ್ನು ಕೇಳಿ ಪಿಶಾಚಜನ್ಮವನ್ನು ಕಳೆದುಕೊಂಡು ಸ್ವರ್ಗಹೊಂದಿದನೆಂದು ಪದ್ಮಪುರಾಣದಲ್ಲಿದೆ.

೨೦. ಒಬ್ಬ ಬ್ರಾಹ್ಮಣಸ್ತ್ರೀಯು ಬಹಿಷ್ಠಳಾದಾಗ ಮೈಲಿಗೆ ಬೆರಕೆಹಾಕಿದ ಪ್ರಯುಕ್ತ ನಾಯಿಜನ್ಮವನ್ನು ಹೊಂದಬೇಕಾಯಿತು. ಅವಳ ಸಂಬಂಧದಿಂದ

ಅವಳಗಂಡನು ಎತ್ತಿನ ಜನ್ಮ ಅನುಭವಿಸಬೇಕಾಯಿತು.

೨೧. ವಿದ್ಯಾದಾನಮಾಡದೆ ಇದ್ದ ಒಬ್ಬ ಪಂಡಿತನು ಹುಳುಕ ಮಾವಿನ ಮರವಾಗಿ ಹುಟ್ಟಿದನು.(ಸ್ಕಾಂದಪುರಾಣ)

೨೨. ನಹುಷನು ಇಂದ್ರಾಣಿಯನ್ನು ಬಯಸಿ ಅಜಗರನಾದನು.

೨೩. ಕಲಿಯ ಹೆಂಡತಿಯಾದ ಅಲಕ್ಷ್ಮಿಯು ಬಹುಕಾಲ ತಪಸ್ಸು ಮಾಡಿ ದುಂದುಭಿಯೆಂಬ ಅಪ್ಸರಾ ಸ್ತ್ರೀಯಾದಳು. ನಂತರ ಅವಳೇ ಮಂಥರಾ ಎಂಬ ಕೈಕೇಯಿಯ ದಾಸಿಯಾದಳು.

೨೪. ದಿಕ್ಪಾಲಕನಾದ ಕುಬೇರನು ನರಕಾಸುರನ ಮಗನಾಗಿ ಭಗವತ್ತ ಎಂಬ ಹೆಸರಿನಿಂದ ಹುಟ್ಟಿದನು.

೨೫. ನಿರ್ಋತಿ ಎಂಬ ದಿಕ್ಪಾಪಾಲಕನು ಭೀಮಸೇನನಿಂದ ಹಿಡಿಂಬೇ ಎಂಬ ರಾಕ್ಷಸಸ್ತ್ರೀಯಲ್ಲಿ ಘಟೋತ್ಕಚನಾಗಿ ಹುಟ್ಟಿದನು.

******

## ಮನಮುಟ್ಟುವ ಧರ್ಮಬೋಧೆ (ಸುಭಾಷಿತ)

**ನ ತೇನ ವೃದ್ಧೋ ಭವತಿ ಯೇನಾಸ್ಯ ಫಲಿತಂ ಶಿರಃ ।**
**ಯೋ ವಾ ಯುವಾಪ್ಯಧೀಯಾನಃ ತಂ ದೇವಾಃ ಸ್ಥವಿರಂ ವಿದುಃ ॥**

***(ಮನುಸ್ಮೃತಿ)***

ದೇಹದ ಶಿರವು ಹಣ್ಣಾದೊಡೆ ಹಿರಿಯನೆನಿಸಲಾರ. ಯಾರು ಯೌವ್ವನದ ಬಿಸಿರಕ್ತದ ಹೊಸ್ತಿಲಿನಲ್ಲಿಯೂ ಅಧ್ಯಯನಾಸಕ್ತನೋ ಅವನೇ ಹಿರಿಯ.

**ಹಿತ್ವಾ ಧರ್ಮಂ ತಥಾರ್ಥಂ ಚ ಕಾಮಂ ಯಸ್ತು ನಿಷೇವತೇ ।**
**ಸ ವೃಕ್ಷಾಗ್ರೇ ಯಥಾ ಸುಪ್ತಃ ಪತಿತಃ ಪ್ರತಿಬುಧ್ಯತೇ ॥** ***(ರಾಮಾಯಣ)***

ಧರ್ಮವನ್ನು, ಅರ್ಥವನ್ನೂ ಬಿಟ್ಟು ಕಾಮವನ್ನೇ ಸೇವಿಸುವವನು; ಮರದ ತುದಿಯಲ್ಲಿ ನಿದ್ರೆ ಹೋದವನಂತೆ ಬಿದ್ದಬಳಿಕ ಎಚ್ಚರಗೊಳ್ಳುತ್ತಾನೆ.

**ಸಂಸಾರಕಟುವೃಕ್ಷಸ್ಯ ದ್ವೇ ಫಲೇ ಹ್ಯಮೃತೋಪಮೇ ।**
**ಸುಭಾಷಿತರಸಾಸ್ವಾದಃ ಸಂಗತಿಃ ಸುಜನೇ ಜನೇ ॥**

ಸಂಸಾರವೆಂಬ ವಿಷವೃಕ್ಷದಲ್ಲಿಯೂ ಅಮೃತಮಯವಾದ ಎರಡು ಹಣ್ಣುಗಳಿವೆ. ಒಂದು ವ್ಯಾಸರ ಹೃದಯದಿಂದ ಹೊರಟ ಸುಭಾಷಿತರಸ. ಮತ್ತೊಂದು ಸಜ್ಜನರ ಸಹವಾಸ.

**ಶಾರೀರಿಕ ತಪಸ್ಸು :-**

**ದೇವದ್ವಿಜಗುರುಪ್ರಾಜ್ಞಪೂಜನಂ ಶೌಚಮಾರ್ಜವಮ್ ।**
**ಬ್ರಹ್ಮಚರ್ಯಮಹಿಂಸಾ ಚ ಶಾರೀರಂ ತಪ ಉಚ್ಯತೇ ॥ *(ಗೀತಾ)***

ದೇವತೆಗಳು-ಬ್ರಾಹ್ಮಣರು-ಗುರುಗಳು-ಜ್ಞಾನಿಗಳು ಇವರನ್ನು ಪೂಜಿಸುವುದು. ಅಂತರ-ಬಾಹ್ಯ ಶುದ್ಧಿಗಳನ್ನು ಕಾಪಾಡಿಕೊಳ್ಳುವುದು. ಮನಸ್ಸು-ಮಾತು-ಕೃತಿಗಳಲ್ಲಿ ಏಕರೀತಿಯನ್ನನುಸರಿಸುವುದು. ಬ್ರಹ್ಮಚರ್ಯ, ಅಹಿಂಸೆ ಇವುಗಳು ಶಾರೀರಕ ತಪಸ್ಸೆನಿಸಿವೆ.

**ವಾಙ್ಮಯ ತಪಸ್ಸು :-**

**ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್ ।**
**ಸ್ವಾಧ್ಯಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ ॥**

ಉದ್ವೇಗವಿಲ್ಲದ ಮಾತು, ಸತ್ಯವಾದ ಸಜ್ಜನರಿಗೆ ಪ್ರಿಯವಾದ ಹಿತವಾದ ಮಾತು, ಸ್ವಶಾಖಾ ಅಧ್ಯಯನ ಇವುಗಳು ವಾಙ್ಮಯ ತಪಸ್ಸು ಎನಿಸಿವೆ.

**ಮಾನಸಿಕ ತಪಸ್ಸು :-**

**ಮನಃಪ್ರಸಾದಃ ಸೌಮ್ಯತ್ವಂ ಮೌನಮಾತ್ಮವಿನಿಗ್ರಹಃ ।**
**ಭಾವಸಂಶುದ್ಧಿರಿತ್ಯೇತತ್ ತಪೋ ಮಾನಸಮುಚ್ಯತೇ ॥ *(ಗೀತಾ)***

ಮನಸ್ಸಿನ ಪ್ರಸನ್ನತೆ, ನಿರ್ಮಲತೆ, ಮನನಶೀಲತೆ, ಜಿತೇಂದ್ರಿಯತೆ, ಹರಿಭಕ್ತಿಸಂಪನ್ನತೆ ಇವುಗಳು ಮಾನಸಿಕ ತಪಸ್ಸೆನಿಸಿವೆ.

**ಸಹನೆ :-**

**ಸಹನಂ ಸರ್ವದುಃಖಾನಾಂ ಅಪ್ರತೀಕಾರಪೂರ್ವಕಮ್ ।**
**ಚಿಂತಾವಿಲಾಸರಹಿತಂ ಸಾ ತಿತಿಕ್ಷಾ ನಿಗದ್ಯತೇ ॥**

ಮತ್ತೊಬ್ಬರು ಅಪಕಾರವೆಸಗಿದಾಗಲೂ ಅದನ್ನು ಪರಿಗಣಿಸದೆ ದುಃಖಗಳನ್ನು ಸಹಿಸುವಿಕೆ, ಅಳುವಿಕೆ, ಚಿಂತೆಗಳಿಗೆ ತುತ್ತಾಗದಿರುವಿಕೆಯು ತಿತಿಕ್ಷಾ ಎನಿಸುತ್ತದೆ.

**ಅಹಿಂಸಾ :-**

**ಕರ್ಮಣಾ ಮನಸಾ ವಾಚಾ ಸರ್ವಭೂತೇಷು ಸರ್ವದಾ ।**
**ಅಕ್ಲೇಶಜನನಂ ಪ್ರೋಕ್ತಾ ತ್ವಹಿಂಸಾ ಪರಮರ್ಷಿಭಿಃ ॥ *(ಕೌರ್ಮೇ)***

ಕೃತಿಗಳಿಂದ, ಮನಸ್ಸಿನಿಂದ, ಮಾತಿನಿಂದ, ಸಕಲ ಪ್ರಾಣಿಗಳಿಗೆ ಹಿಂಸೆ ನೀಡದಿರುವಿಕೆಯನ್ನು ಪರಮರ್ಷಿಗಳು ಅಹಿಂಸೆ ಎಂದು ಕರೆದಿದ್ದಾರೆ.

**ಸತ್ಯ :-**

**ಸತ್ಯೇನ ಸರ್ವಮಾಪ್ನೋತಿ ಸತ್ಯೇ ಸರ್ವಂ ಪ್ರತಿಷ್ಠಿತಮ್ ।**
**ಯಥಾರ್ಥಕಥನಾಚಾರಃ ಸತ್ಯಂ ಪ್ರೋಕ್ತಂ ದ್ವಿಜಾತಿಭಿಃ ॥ *(ಕೌರ್ಮೇ)***

ಸತ್ಯವಚನದಿಂದ ಎಲ್ಲಾವನ್ನೂ ಸಾಧಿಸಿಕೊಳ್ಳಬಹುದು. ಸತ್ಯವಲ್ಲಿಯೇ ಎಲ್ಲ ಸುಖಗಳು ಪ್ರತಿಷ್ಠಿತವಾಗಿವೆ. ಯಥಾರ್ಥವಾಗಿ ಮಾತನಾಡುವಿಕೆಯು ಸತ್ಯವೆಂದು ಬ್ರಾಹ್ಮಣರಿಂದ ಹೇಳಲ್ಪಟ್ಟಿದೆ.

**ದಯಾ :-**

**ಸ್ವದುಃಖೇಷ್ವಿವ ಕಾರುಣ್ಯಂ ಪರದುಃಖೇಷು ಸೌಹೃದಾತ್ ।**
**ದಯೇತಿ ಮುನಯಃ ಪ್ರಾಹುಃ ಸಾಕ್ಷಾದ್ಧರ್ಮಸ್ಯ ಸಾಧನಮ್ ॥*(ಕೌರ್ಮೇ)***

ತನಗೆ ದುಃಖ ಒದಗಿದಾಗ ಮನಸ್ಸಿನಲ್ಲಿ ತನ್ನ ಬಗ್ಗೆ ಯಾವ ಸ್ಪಂದನೆಯನ್ನು ಹೊಂದಿರುತ್ತಾನೆಯೋ ಅವರಂತೆಯೇ ಮತ್ತೊಬ್ಬರ ದುಃಖದಲ್ಲಿಯೂ ಸ್ಪಂದಿಸುವಿಕೆಯೇ ಮುನಿಗಳು ಹೇಳಿದ ದಯೆ. ಇದು ಧರ್ಮಕ್ಕೆ ನೇರ ದಾರಿಯಾಗಿದೆ.

**ಮಮತಾ :-**

**ಮಮ ಮಾತಾ ಮಮ ಪಿತಾ ಮಮ ಭ್ರಾತಾ ಮಮಾತ್ಮಜಾಃ ।**
**ಮಮೇದಮಿತಿ ಜಂತೂನಾಂ ಮಮತಾ ಬಾಧತೇ ವೃಥಾ ॥ *(ಭಾರತ)***

ನನ್ನ ತಾಯಿ, ತಂದೆ, ನನ್ನಸಹೋದರ, ನನ್ನ ಮಕ್ಕಳು, ಹೀಗೆ ನನ್ನದೆಂಬ ವ್ಯರ್ಥವಾದ ಮಮತೆ ಜೀವರನ್ನು ಸುಡುತ್ತಿದೆ.

**ವಾತಿ ಗಂಧಃ ಸುಮನಸಾಂ ಪ್ರತಿವಾತಂ ಕಥಂಚನ ।**
**ಧರ್ಮಜಸ್ತು ಮನುಷ್ಯಾಣಾಂ ವಾತಿ ಗಂಧಃ ಸಮಂತತಃ ॥**

ಹೂವಿನ ಕಂಪು ಗಾಳಿಬೀಸುವ ದಿಕ್ಕಿನೆಡೆಮಾತ್ರ, ಆದರೆ ಧರ್ಮದ ಕಂಪು ಎಲ್ಲೆಡೆಹರಡುತ್ತದೆ.

******

## ಷಡ್ವೈರಿಗಳಲ್ಲ-ಷಣ್ಮಿತ್ರರು

**ಕಾಮಸ್ತೇಂಘ್ರಿಯುಗಾರ್ಚನೇsಮಲಧಿಯಾಂ ಲೋಭಃ ಸುಪುಣ್ಯಾರ್ಜನೇ**
**ಮಾತ್ಸರ್ಯಂ ಚರಿತಾನುಕೀರ್ತನಸುಧಾಪಾನಾನ್ಮದಃ ಶತ್ರುಷು ।**
**ಕ್ರೋಧೋ ಭಕ್ತಜನೇಷು ರಾಗ ಉದಯಾಚ್ಛ್ರೀವಿಟ್ಠಲಾನ್ಯತ್ರ ನೋ**
**ಯಚ್ಛತ್ರುರ್ನಹಿ ಶತ್ರುರುಚ್ಚನಿಲಯಸ್ಯಾನ್ಯಸ್ಯಶತ್ರುರ್ಭವೇತ್ ॥**
***(ರುಕ್ಮಿಣೀಶವಿಜಯ)***

| | | |
|---|---|---|
| ಹರಿಪಾದಪೂಜೆಯಲ್ಲಿ | - | ಕಾಮ |
| ಸತ್ಸಂಗದಲ್ಲಿ | - | ಲೋಭ |
| ಪುಣ್ಯಗಳಿಸುವಲ್ಲಿ | - | ಮಾತ್ಸರ್ಯ |
| ಹರಿಕಥಾಸುಧಾಪಾನದಿಂದ | - | ಮದ |
| ಹರಿದ್ವೇಶಿಗಳಲ್ಲಿ | - | ಕ್ರೋಧ |
| ಹರಿಭಕ್ತರಲ್ಲಿ | - | ಮೋಹ |

ಹೀಗೆ ಹರಿ ಪರಾಯಣರಾದವರಲ್ಲಿ ಸ್ನೇಹಬೆಳೆಸಿದರೆ ಷಡ್ವೈರಿಗಳು ಷಣ್ಮಿತ್ರರಾಗುತ್ತಾರೆ.

**ಪುಣ್ಯಶ್ರೇಣ್ಯತಿದೂರಮಪ್ಯನುದಿನಂ ಮೂಕಂ ಸತಾಂ ದೂಷಣೇಷು**
**ಅಂಧಂ ಮೀನದೃಗೀಕ್ಷಣೇಷು ಬಧಿರಂ ತ್ವದ್ಭಿನ್ನಗೋಷ್ಠೀಷು ಮಾಮ್ ।**
**ಪಂಗುಂ ಪಾಪಕರ ಪ್ರಮಾಣಕರಣೇ ಪಾಣಿಂ ಚ ತತ್ಕರ್ಮಸು**
**ಕ್ಲೀಬಂ ಗ್ರಾಮ್ಯರತೌ ಮುಕುಂದ ಕುರು ಮಾಂ ಮೂಢಂ ತದೀಯಸ್ಮೃತೌ ॥**

ಪುಣ್ಯ ಸಂಗ್ರಹದಲ್ಲಿ ಅನಾಸಕ್ತನಾದ ನನ್ನನ್ನು ಸಜ್ಜನರನ್ನು ದೂಷಿಸುವಲ್ಲಿ ಮೂಕನನ್ನಾಗಿಸು. ಚಪಲನೋಟದ ಚಲುವೆಯರ ಬಳಿ ಕಣ್ಣುಸಾಗದಂತೆ ಕುರುಡನನ್ನಾಗಿ ಮಾಡು. ಹರಿಯೇ! ನಿನ್ನ ವಾರ್ತಾಲಾಪವಿಲ್ಲದ ಸಭೆಗಳಲ್ಲಿ ಕಿವುಡನನ್ನಾಗಿಸು. ಪಾಪಿಷ್ಠವಾದ ಕರ್ಮಗಳ ಕಡೆ ಕಾಲು ಚಲಿಸುವಲ್ಲಿ ಕುಂಟನನ್ನಾಗಿಸು. ಪಾಪಕರ್ಮಗಳಲ್ಲಿ ಕೈ ಇಲ್ಲದವನನ್ನಾಗಿಸು. ನಿಷಿದ್ಧರತಿಯಲ್ಲಿ ನಪುಂಸಕನನ್ನಾಗಿಸು. ಹಿಂದೆ ಹೇಳಿದ ದುರ್ವಿಚಾರಗಳಲ್ಲಿ ಶ್ರೀಹರಿಯೇ ನನ್ನನ್ನು ದಡ್ಡನನ್ನಾಗಿಸು.

******

# ತಿಥಿ ನಕ್ಷತ್ರಾದಿಗಳು

## ನಕ್ಷತ್ರಗಳು

ಅಶ್ವಿನೀ, ಭರಣೀ, ಕೃತ್ತಿಕಾ, ರೋಹಿಣೀ, ಮೃಗಶಿರಾ, ಆರ್ದ್ರಾ, ಪುನರ್ವಸು, ಪುಷ್ಯಾ, ಆಶ್ಲೇಷಾ, ಮಘಾ, ಪೂರ್ವಾ, ಉತ್ತರಾ, ಹಸ್ತಾ, ಚಿತ್ರಾ, ಸ್ವಾತೀ, ವಿಶಾಖಾ, ಅನುರಧಾ, ಜ್ಯೇಷ್ಠಾ, ಮೂಲಾ, ಪೂರ್ವಾಷಾಡಾ, ಉತ್ತರಾಷಾಡಾ, ಶ್ರವಣಾ, ಧನಿಷ್ಠಾ, ಶತಬಿಷಾ, ಪೂರ್ವಾಭಾದ್ರಾ, ಉತ್ತರಾಭಾದ್ರಾ, ರೇವತೀ.

## ಮಾಸಗಳು

ಚೈತ್ರ, ವೈಶಾಖ, ಜ್ಯೇಷ್ಠ, ಆಷಾಢ, ಶ್ರಾವಣ, ಭಾದ್ರಪದ, ಆಶ್ವಯುಜ, ಕಾರ್ತೀಕ, ಮಾರ್ಗಶಿರ, ಪುಷ್ಯ, ಮಾಘ, ಫಾಲ್ಗುಣ.

## ತಿಥಿಗಳು

ಪ್ರತಿಪತ್, ದ್ವಿತೀಯಾ, ತೃತೀಯಾ, ಚತುರ್ಥೀ, ಪಂಚಮೀ, ಷಷ್ಠೀ, ಸಪ್ತಮೀ, ಅಷ್ಟಮೀ, ನವಮೀ, ದಶಮೀ, ಏಕಾದಶೀ, ದ್ವಾದಶೀ, ತ್ರಯೋದಶೀ, ಚತುರ್ದಶೀ, ಪೂರ್ಣಿಮಾ/ ಅಮಾವಾಸ್ಯೆ.

## ಋತುಗಳು. (೨ ಮಾಸಕ್ಕೆ ೧ ಋತು)

ವಸಂತ, ಗ್ರೀಷ್ಮ, ವರ್ಷ, ಶರತ್, ಹೇಮಂತ, ಶಿಶಿರ.

## ರಾಶಿಗಳು (ಸೌರ ಮಾಸಗಳು)

ಮೇಷ, ವೃಷಭ, ಮಿಥುನ, ಕರ್ಕಾಟಕ, ಸಿಂಹ, ಕನ್ಯಾ, ತುಲಾ, ವೃಶ್ಚಿಕ, ಧನು, ಮಕರ , ಕುಂಭ, ಮೀನ.

******

# ಹರಿವಾಸರಸಂಕಲ್ಪವ್

## ದಶಮೀ ಸಂಕಲ್ಪ

**ದಶಮೀ ದಿವಸೇ ಪ್ರಾಪ್ತೇ ವ್ರತಸ್ಥೋಽಹಂ ಜನಾರ್ದನ ।**
**ತ್ರಿದಿನಂ ದೇವ ದೇವೇಶ ನಿರ್ವಿಘ್ನಂ ಕುರು ಕೇಶವ ॥**

(ಜನಾರ್ದನ – ಮೂರು ದಿನಗಳ ಈ ವ್ರತಕ್ಕೆ ದಶಮಿಯಂದು ಸನ್ನದ್ಧನಾಗಿದ್ದೇನೆ. ಇದನ್ನು ನಿರ್ವಿಘ್ನವಾಗಿ ನೆರವೇರಿಸು.)

## ಏಕಾದಶೀ ಸಂಕಲ್ಪ

**ಏಕಾದಶ್ಯಾಂ ನಿರಾಹಾರಃ ಸ್ಥಿತ್ವಾಽಹಂ ಚ ಪರೇಽಹನಿ ।**
**ಭೋಕ್ಷ್ಯಾಮಿ ಪುಂಡರೀಕಾಕ್ಷ ಶರಣಂ ಮೇ ಭವಾಚ್ಯುತ ॥**

(ಏಕಾದಶಿಯಂದು ನಿರಾಹಾರನಾಗಿದ್ದು ಮುಂದಿನ ದಿನ ಭೋಜನ ಮಾಡುವೆ. ಅಚ್ಯುತ! ಚ್ಯುತಿ ಬರದಂತೆ ರಕ್ಷಿಸು. ಪುಂಡರೀಕಾಕ್ಷ ನೀನು ರಕ್ಷಕನಾಗು.)

## ದ್ವಾದಶೀ ಸಮರ್ಪಣೆ (ಪಾರಣಾ ಅನಂತರ)

**ಏಕಾದಶ್ಯುಪವಾಸೇನ ದ್ವಾದಶ್ಯಾಂ ಪಾರಣೇನ ಚ ।**
**ಯದಾರ್ಜಿತಂ ಮಯಾ ಪುಣ್ಯಂ ತೇನ ಪ್ರೀಣಾತು ಕೇಶವಃ ॥**

******

# ಧರ್ಮಶಾಸ್ತ್ರ ಅಶೌಚ ಪ್ರಕರಣ

## ಸಪಿಂಡಾದಿ ಶಬ್ದಾರ್ಥ

ಮೂಲಪುರುಷನಿಂದಾರಂಭಿಸಿ ೭ ತಲೆಯ ವರೆಗೆ ಸಪಿಂಡರು.

೮ ರಿಂದ ೧೪ ರವರೆಗೆ ಸೋದಕರು

೧೫ ರಿಂದ ೨೧ರ ವರೆಗೆ ಸಗೋತ್ರರು

ಸಪಿಂಡರಿಗೆ ೧೦ ದಿನ ಅಶೌಚ, ಸೋದಕರಿಗೆ ೩ ದಿನ ಅಶೌಚ. ಸಗೋತ್ರರಿಗೆ ಮರಣಾದಿ ವಾರ್ತೆ ಕೇಳಿದ ಕೂಡಲೇ ಸ್ನಾನ ಮಾತ್ರ.

ಅಶೌಚಾಚರಣೆಯ ಕಾಲದಲ್ಲಿ ಸಪಿಂಡರು ಮತ್ತು ಸೋದಕರು ಉದಕಾಂಜಲಿ ಪ್ರದಾನ ಮಾಡತಕ್ಕದ್ದು. ಕಟಿಶಯ್ಯಾದಿ ವರ್ಜಿಸಿ ಅಶೌಚ ಪರಿಪಾಲನೆ ಮಾಡಬೇಕು.

## ಬಾಂಧವಿಕಾಶೌಚ ತ್ರಿದಿನ

ಉಪನಯನ ಪ್ರಾಯವಾದ ಪುರುಷನಿಗೆ (೮ ವರ್ಷ)

೧. ಮಾತಾಮಹ (ತಾಯಿಯ ತಂದೆ)
೨. ಮಾತಾಮಹಿ (ತಾಯಿಯ ತಾಯಿ)
೩. ಮಾತೃಷ್ವಸೃ (ತಾಯಿ ಸಹೋದರಿ)
೪. ಪಿತೃಷ್ವಸೃ (ತಂದೆಯ ಸಹೋದರಿ)
೫. ಸ್ವಂತ ಸಹೋದರಿ
೬. ಅವರ ಮಗ
೭. ಸೋದರ ಮಾವ ತಾಯಿಯ
೮. ಅವರ ಪತ್ನಿ
೯. ತನ್ನ ಮಗಳು
೧೦. ಮಗಳ ಮಗ
೧೧,೧೨. ಪತ್ನಿಯ ತಂದೆ, ತಾಯಿ

ಈ ಹನ್ನೆರಡು ಮಂದಿಯ ಬಗ್ಗೆ ೩,೩ ದಿವಸ ಅಶೌಚವಿದೆ.

ಪತ್ನಿಯ ಸಹೋದರನ ಮರಣಾದಿಗಳಲ್ಲಿ ೧ ದಿನ ಮಾತ್ರ ಅಶೌಚ. ಅವರ ಹೆಂಡತಿಯರ ಮರಣದಲ್ಲಿ ಸ್ನಾನ ಮಾತ್ರ. ತಾಯಿಯ ಅಕ್ಕ ತಂಗಿಯರ ಗಂಡಂದಿರ ಮರಣಗಳಲ್ಲಿ ಸ್ನಾನ ಮಾತ್ರ.

ಈ ಎರಡು ವಿಷಯಗಳ ಬಗ್ಗೆ ಪ್ರಮಾಣಗಳು

ಸ್ಯಾಲಕಸ್ಯ ಏಕಾಹ: ತತ್ಪತ್ನ್ಯಾ: ಸ್ನಾನಮಾತ್ರಂ
ಮಾತೃಷ್ವಸ್ರಾದಿ ಭರ್ತ್ರ್ಣಾಂ ಸ್ನಾನಮಾತ್ರಂ

## ಪಕ್ಷಿಣ್ಯಾಶೌಚ

೧. ತಾಯಿಯ ಸಹೋದರಿಯ ಮಗಳು
೨. ತಾಯಿಯ ಸಹೋದರಿಯ ಮಗ
* ೩. ಮಗನ ಪತ್ನಿ

೪. ಸೋದರತ್ತೆಯ ಮಗ

* ೫. ಸೋದರತ್ತೆಯ ಮಗಳು

* ೬. ಮಗನ ಪತ್ನಿ

೭. ತನ್ನ ಮಗನ ಮಗಳು

೮. ತನ್ನ ಸೋದರಿಯ ಮಗಳು

೯. ಸೋದರನ ಮಗಳು

೧೦. ತಂದೆಯ ಸಹೋದರನ ಮಗಳು

೧೧. ಮಗನ ಮಗಳು

೧೨. ಸೋದರ ಮಾವನ ಮಗಳು

೧೩. ಸೋದರ ಮಾವನ ಮಗ

* ೧೪. ಸೋದರ ಮಾವನ ಮಗನ ಪತ್ನಿ

* ೧೫. ಸೋದರಿಯ ಮಗನ ಪತ್ನಿ

* ೧೬. ಮಗಳ ಮಗನ ಪತ್ನಿ

ಈ ೧೬ ಮಂದಿಗೆ ಪಕ್ಷಿಣೀ $1^{1/2}$, ದಿನ, (ಒಂದು ಹಗಲು ಎರಡು ರಾತ್ರಿ ಅಥವಾ ಒಂದಿ ರಾತ್ರಿ ಎರಡು ಹಗಲು) ಅಂದರೆ ಸೂರ್ಯಾಸ್ತದ ಮೊದಲು ಸತ್ತರೆ ಆ ಹಗಲು + ಆ ರಾತ್ರಿ + ಮರುದಿನ ಹಗಲು + ರಾತ್ರಿ (ಸಂಜೆ ಶುದ್ಧ ಮಾಡಲು ಆಗುವುದಿಲ್ಲವಾದ್ದರಿಂದ) ಸೂರ್ಯಾಸ್ತದ ನಂತರ ಆದರೆ ಆ ರಾತ್ರಿ ಮರುದಿನ ಹಗಲು, ಮರುದಿನ ರಾತ್ರಿ

( * ಈ ಚಿಹ್ನೆ ಇರುವವರಿಗೆ ಸಂಗ್ರಹಕಾರರ ಅಭಿಪ್ರಾಯದಲ್ಲಿ ಸ್ನಾನ ಮಾತ್ರ ಸಾಕು.)

### ಪಕ್ಷಿಣಿ ವಿವಾಹಿತ ಸ್ತ್ರೀಗೆ

■ ೧. ಮಾತಾಮಹ

■ ೨. ಮಾತಾಮಹಿ

೩. ಸೋದರಮಾವ

೪. ಸೋದರಮಾವನ ಪತ್ನಿ

೫. ಸೋದರ ಮಾವನ ಮಗ

೬. ಸೋದರ ಮಾವನ ಮಗಳು

೭. ತಾಯಿಯ ಸಹೋದರಿ

೮. ಅವರ ಮಗ

೯. ಅವರ ಮಗಳು

೧೦. ಸೋದರತ್ತೆ

೧೧. ಅವರ ಮಗ

೧೨. ಅವರ ಮಗಳು

೧೩. ತಂದೆಯ ಒಡಹುಟ್ಟಿದ ಸಹೋದರ

೧೪. ಅವರ ಮಗ

೧೫. ಅವರ ಮಗಳು

೧೬. ತನ್ನ ಸಹೋದರ

೧೭. ಅವರ ಮಗ

೧೮. ಅವರ ಮಗಳು

■ ೧೯ ಅವರ ಮಗಳು ೨೦. ಅವರ ಮಗ
೨೧. ಅವರ ಮಗಳು ೨೨. ತನ್ನ ಮಗನ ಮಗಳು (ವಿವಾಹಿತೆ)
೨೩. ತನ್ನ ಮಗಳ ಮಗಳು ೨೪. ತಂದೆಯ ತಂದೆ
೨೫. ತಂದೆಯ ತಾಯಿ
◆ ೨೬. ಸೋದರ ಮಾವನ ಮಗನ ಪತ್ನಿ
◆ ೨೭. ಸೋದರತ್ತೆಯ ಮಗನ ಪತ್ನಿ
೨೮. ತಾಯಿಯ ಸಹೋದರಿಯ ಮಗನ ಪತ್ನಿ
◆ ೨೯. ತಂದೆಯ ಸಹೋದರನ ಮಗನ ಪತ್ನಿ
◆ ೩೦. ತನ್ನ ಸಹೋದರಿಯ ಮಗನ ಪತ್ನಿ
◆ ೩೧. ತನ್ನ ಸಹೋದರನ ಮಗನ ಪತ್ನಿ
◆ ೩೨. ಮಗಳ ಮಗನ ಪತ್ನಿ
೩೩. ಸಹೋದರನ ಪತ್ನಿ
೩೪. ತಂದೆಯ ಸಹೋದರನ ಪತ್ನಿ

■ ಈ ಗುರುತಿನವರು ಪರಸ್ಪರ ಮನೆಯಲ್ಲಿ ಮೃತಿ ಹೊಂದಿದರೆ ಪರಸ್ಪರ ೩ ದಿನ ಅಶೌಚ. ◆ ಈ ಗುರುತಿನವರು ದೂರದಲ್ಲಿದ್ದರೆ ಸ್ನಾನ ಮಾತ್ರ.

******

# ಆಚಮನದ ಕಥೆ

ಉತ್ತಂಕ ಎಂಬ ಋಷಿಕುಮಾರನು ಗುರುದಕ್ಷಿಣೆಯಾಗಿ ಪೌಷ್ಯರಾಜನ ಪತ್ನಿಯ ಕುಂಡಲಗಳನ್ನು ತರುವುದಕ್ಕಾಗಿ ಹೋಗುವನು. ಆದರೆ ಅಂತಃಪುರದಲ್ಲಿ ಇರುವ ಪತಿವ್ರತೆ ಪೌಷ್ಯನ ಪತ್ನಿ ಕಾಣಿಸುವುದೇ ಇಲ್ಲ. ಪೌಷ್ಯನ ಸೂಚನೆಗನುಗುಣವಾಗಿ ಉತ್ತಂಕನು ತನ್ನ ಅಶುದ್ಧಿಯ ಕಾರಣವನ್ನು ನೆನಪಿಸಿಕೊಳ್ಳುವನು-ನಾನು ನಿಂತುಕೊಂಡೇ, ನಡೆಯುತ್ತಲೇ ಆಚಮನ ಮಾಡಿದ್ದೆ. ಇದರಿಂದಾಗಿ ನಿಂತುಕೊಂಡು, ತಿರುಗಾಡುತ್ತಾ ಆಚಮನ ನಡೆಸಬಾರದೆಂಬ ನಿಯಮ ನನ್ನಿಂದ ಉಲ್ಲಂಘಿಸಲ್ಪಟ್ಟಂತಾಗಿದೆ. ಆದುದರಿಂದಲೇ ಪತಿವ್ರತೆಯ ದರ್ಶನ ದೊರಕದಂತಹ ಅಪಾವಿತ್ರ್ಯಕ್ಕೆ ನಾನು ಒಳಗಾಗಿರುವೆ. ಮತ್ತೆ ಈ ತಪ್ಪನ್ನು ತಿದ್ದಿಕೊಂಡು, ಅಂದರೆ ಪೂರ್ವಮುಖವಾಗಿ ಕುಳಿತುಕೊಂಡು ಕೈ, ಪಾದ, ಮುಖಗಳನ್ನು ತೊಳೆದುಕೊಂಡು, ಶಬ್ದಮಾಡದೆ, ನೊರೆ ಇಲ್ಲದ-ಬಿಸಿಯಿಲ್ಲದ ಹೃದಯದವರೆಗೆ ತಲುಪ ಬಲ್ಲಷ್ಟು ಪ್ರಮಾಣದಿಂದ ನೀರಿನಿಂದ ಮೂರು ಬಾರಿ ಪಾನಮಾಡಿ, ಕೈಗಳನ್ನೊರೆಸಿ, ಇಂದ್ರಿಯಗಳನ್ನು ಮುಟ್ಟಿ, ಆಚಮನಕ್ರಿಯೆ ಪೂರೈಸಿ, ಪೌಷ್ಯರಾಜನ ಅರಮನೆಯನ್ನು ಪ್ರವೇಶಿಸುವನು. ಆಗ ಪೌಷ್ಯರಾಜನ ಪತ್ನಿ ಪತಿವ್ರತೆಯ ದರ್ಶನ ಉತ್ತಂಕನಿಗೆ ದೊರಕುವುದು. ಯಾವುದೋ ಒಂದು ನಿಯಮದ ಉಲ್ಲಂಘನೆಯಿಂದಲೆ ಆಚಮನದ ಫಲ ದೊರಕದೆ, ಬದಲಾಗಿ ದುಷ್ಫಲಕ್ಕೆ ಒಳಗಾಗಬೇಕಾಗುವಂತಾಯಿತು. ಆದುದರಿಂದ ಆಚಮನಕ್ಕೆ ಸಂಬಂಧಿಸುವ ಪ್ರತಿಯೊಂದು ನಿಯಮವನ್ನೂ ಕಟ್ಟುನಿಟ್ಟಾಗಿ ಪಾಲಿಸಬೇಕೆಂಬುದು ಸ್ಪಷ್ಟ. ಹಾಗಾದರೇನೇ ಅದರ ಪ್ರಯೋಜನವನ್ನು ಪಡೆಯಬಹುದಾಗಿದೆ.

# ಪ್ರಾಣಾಯಾಮ

ರೇಚಕ, ಪೂರಕ ಹಾಗೂ ಕುಂಭಕ ಎಂಬ ಮೂರು ಅಂಗಗಳನ್ನೊಳಗೊಂಡ ಪ್ರಾಣಯಾಮದಲ್ಲಿ ರೇಚಕಾದಿಗಳನ್ನು ಯಾವ ಯಾವ ಬೆರಳುಗಳಿಂದ ನಡೆಸಬೇಕೆಂಬುದೂ, ಎಷ್ಟೆಷ್ಟು ಅವಧಿಯಲ್ಲಿ ನಡೆಸಬೇಕೆಂಬುದೂ ಮುಖ್ಯವಾದುದು. 'ಸ್ಮೃತ್ಯರ್ಥಸಾಗರ'ದಲ್ಲಿ ಆ ಬಗ್ಗೆ ಹೀಗೆ ಮಾಹಿತಿಯನ್ನು ನೀಡಲಾಗಿದೆ.

**ಕನಿಷ್ಠಾನಾಮಿಕಾಭ್ಯಾಂ ಚ ಗೃಹೀತ್ವಾ ವಾಮಭಾಗತಃ ।**
**ಹ್ರಸ್ವೋಚ್ಚಾರಣಕಾಲಾಖ್ಯಾ ಮಾತ್ರಾಃ ಷೋಡಶ ರೇಚನೇ ॥**
**ದ್ವಾತ್ರಿಂಶತ್ಪೂರಣೇ ಪ್ರೋಕ್ತಾಶ್ಚತುಃಷಷ್ಟಿಸ್ತು ಕುಂಭಕೇ ।**

ದಕ್ಷನಾಸಾಪುಟೇನೈವ ಪೂರ್ವಂ ವಾಯುಂ ವಿರೇಚಯೇತ್ ॥
ಅಂಗುಷ್ಠೇನ ಪುಟಂ ಬದ್ಧ್ವಾ ನಾಸಾಯಾಂ ದಕ್ಷಿಣಂ ಪುನಃ ।
ವಾಮಭಾಗೇನ ಸಂಪೂರ್ಯ ಧಾರಯೇತ್ ಪೂರ್ಣಕುಂಭವತ್ ॥
ಪಂಚಾಗುಲೀಭಿರ್ನಾಸಾಗ್ರಪೀಡನಂ ವಾಯುಧಾರಣೇ ।
ಮುದ್ರೇಯಂ ಸರ್ವಪಾಪಘ್ನೀ ವಾನಪ್ರಸ್ಥಗೃಹಸ್ಥಯೋಃ ॥
ಕನಿಷ್ಠಾನಾಮಿಕಾಂಗುಷ್ಠೈರ್ಯತೇಶ್ಚ ಬ್ರಹ್ಮಚಾರಿಣಃ
ನಾಸಾಗ್ರಪೀಡನಂ ಪ್ರೋಕ್ತಂ....॥

ಕಿರುಬೆರಳು ಹಾಗೂ ಉಂಗುರದ ಬೆರಳುಗಳಿಂದ ಮೂಗಿನ ಎಡಭಾಗವನ್ನು ಅದುಮಿ, ಮೂಗಿನ ಬಲಭಾಗದಿಂದ ದೇಹದ ವಾಯುವನ್ನು ಪೂರ್ಣವಾಗಿ ಹೊರಗೆ ಹೊಮ್ಮಿಸಬೇಕು. ಒಂದು ಹ್ರಸ್ವವರ್ಣದ ಉಚ್ಚಾರಣೆಯ ಕಾಲವು 'ಮಾತ್ರಾ' ಎನಿಸಿದ್ದು, ಇಂತಹ ಹದಿನಾರು ಮಾತ್ರೆಗಳ ಅವಧಿಯಲ್ಲಿ ರೇಚಕವನ್ನು ನಡೆಸಬೇಕು. ಅಂಗುಷ್ಠಬೆರಳಿನಿಂದ ಮೂಗಿನ ಬಲರಂಧ್ರವನ್ನು ಅದುಮಿ ಹಿಡಿದು ಎಡಭಾಗದಿಂದ ಗಾಳಿಯನ್ನು ಒಳಗೆ ತೆಗೆದುಕೊಳ್ಳಬೇಕು. ಈ 'ಪೂರಕ' ಪ್ರಕ್ರಿಯೆಯನ್ನು ರೇಚಕಕ್ಕಿಂತ ಎರಡು ಪಟ್ಟು ಕಾಲದಲ್ಲಿ ಅಂದರೆ ಮೂವತ್ತೆರಡು ಮಾತ್ರೆಗಳ ಅವಧಿಯಲ್ಲಿ ನಡೆಸಬೇಕು. ಮತ್ತೆ ಐದೂ ಬೆರಳುಗಳಿಂದ ಮೂಗಿನ ಎರಡೂ ಭಾಗಗಳನ್ನು ಗಟ್ಟಿಯಾಗಿ ಮುಚ್ಚಿ ವಾಯುವನ್ನು ಒಳಗೆ ಧರಿಸಿಕೊಳ್ಳಬೇಕು. ವಾನಪ್ರಸ್ಥಾಶ್ರಮಿಗಳೂ, ಗೃಹಸ್ಥಾಶ್ರಮಿಗಳೂ ಎಲ್ಲ ಬೆರಳುಗಳಿಂದ ಕುಂಭಕದ ಸ್ಥಿತಿಯಲ್ಲಿ ಮೂಗಿನ ತುದಿಯಲ್ಲಿ ಹಿಡಿದುಕೊಳ್ಳಬೇಕಾದರೆ, ಯತಿಗಳು ಮತ್ತೆ ಬ್ರಹ್ಮಚಾರಿಗಳು ಕಿರುಬೆರಳು, ಉಂಗುರಬೆರಳು ಹಾಗೂ ಅಂಗುಷ್ಠಗಳಿಂದಷ್ಟೇ ಹಿಡಿದುಕೊಳ್ಳಬೇಕು. ಈ 'ಕುಂಭಕ' ಪ್ರಕ್ರಿಯೆಯನ್ನು ಪೂರಕಕ್ಕಿಂತ ಎರಡು ಪಟ್ಟು ಅವಧಿಯಲ್ಲಿ ಅಂದರೆ ೬೪ ಮಾತ್ರೆಗಳ ಅವಧಿಯಲ್ಲಿ ನಡೆಸಬೇಕು.

## ಅರ್ಘ್ಯವನ್ನೇಕೆ ಕೊಡಬೇಕು?

'ಮಂದೇಹ " ಎಂಬ ಪ್ರಸಿದ್ಧರಾದ ದೈತ್ಯರನ್ನು ಸಂಹರಿಸುವುದಕ್ಕಾಗಿ ಸೂರ್ಯಾರ್ಘ್ಯವನ್ನು ಕೊಡಬೇಕೆಂದು "ಮಂದೇಹಾನಾಂ ವಧಾರ್ಥಾಯ ಪ್ರಕ್ಷಿಪೇದುದಕಾಂಜಲಿಮ್ ಎಂದು ಹೇಳಲಾಗಿದೆ. ಯಜುರ್ವೇದ ಸ್ವಾಧ್ಯಾಯ ಬ್ರಾಹ್ಮಣ ವಾಕ್ಯದಲ್ಲಿಯೂ ಈ ವಿಚಾರವು ಉಲ್ಲೇಖಿತವಾಗಿದೆ.

ಮಂದೇಹ ಎಂದು ಪ್ರಸಿದ್ಧರಾದ ರಾಕ್ಷಸರು ಆದಿ ಕಾಲದಲ್ಲಿ ಬ್ರಹ್ಮದೇವರನ್ನು ಕುರಿತು ಉಗ್ರವಾದ ತಪಸ್ಸನ್ನು ಮಾಡಿ, ಮೆಚ್ಚಿಸಿದರು. ಬ್ರಹ್ಮನು ಅವರಿಗೆ ವರವನ್ನು ಕರುಣಿಸಿದನು.

ಆ ರಾಕ್ಷಸರು ಸೂರ್ಯನ ಜೊತೆಯಲ್ಲಿ ಯುದ್ಧವನ್ನು ಯಾವಾಗಲೂ ಮಾಡುತ್ತಿರುವಂತೆ ಬೇಡಿದ್ದರು. ಬ್ರಹ್ಮನ ಈ ವರ ಬಲದಿಂದ ಕೊಬ್ಬಿದ ಆ ರಾಕ್ಷಸರು ಸೂರ್ಯನು ಉದಯಿಸುತ್ತಿರುವಾಗಲೇ ಸೂರ್ಯನೊಡನೆ ಯುದ್ಧವನ್ನು ಮಾಡಲು ಪ್ರತಿದಿನವೂ ಆರಂಭಿಸಿ ಸೂರ್ಯಾಸ್ತಮಾನದವರೆಗೂ ಎಡೆಬಿಡದೆ ಯುದ್ಧವನ್ನು ಮಾಡುತ್ತಿರುವರು.

ಈ ರಾಕ್ಷಸರು ಗಾಯತ್ರೀ ಮಂತ್ರದಿಂದ ಜಪಿಸಲ್ಪಟ್ಟ ನೀರಿನಿಂದ ಸಾಯುವರು. ಈ ಜಲವನ್ನು ಬಿಟ್ಟು ಉಳಿದ ಯಾವ ಅಸ್ತ್ರಶಸ್ತ್ರಗಳಿಂದ ಸಾಯಲಾರರು. ಇದನ್ನು ತಿಳಿದು ಪ್ರತಿದಿನದಲ್ಲಿಯೂ ಸಂಧ್ಯಾಕಾಲದಲ್ಲಿ ಗಾಯತ್ರಿ ಮಂತ್ರದಿಂದ ಜಪಿಸಿ ಬ್ರಹ್ಮಜ್ಞಾನಿಗಳಾದ ವಾಲ್ಮಖಿಲ್ಯರೆಂಬ 60 ಸಾವಿರ ಮಹರ್ಷಿಗಳು ಮೇಲ್ಮುಖವಾಗಿ ಚೆಲ್ಲುತ್ತಿರುವರು. ಈ ಜಲದ ಒಂದೊಂದು ಬಿಂದು ವಜ್ರಾಯುಧರೂಪವಾಗಿ ಆ ದೈತ್ಯರನ್ನು ಸಂಹರಿಸುತ್ತದೆ. ಸತ್ತ ಆ ರಾಕ್ಷಸರು ಮಂದೇಹಾರುಣ ಎಂಬ ದ್ವೀಪದಲ್ಲಿ ಹೆಣವಾಗಿ ಬೀಳುತ್ತವೆ. ಈ ರಾಕ್ಷಸರ ವಧೆಯಿಂದ ಬಂದ ಪಾಪವು ಅಸಾವಾದಿತ್ಯೋ ಬ್ರಹ್ಮ ಎಂಬ ಮಂತ್ರಪೂರ್ವಕ ಪ್ರದಕ್ಷಿಣೆಯಿಂದ ನಾಶವಾಗುತ್ತದೆ. ಈ ವಿಚಾರವು ವಿಷ್ಣುಪುರಾಣದಲ್ಲಿಯೂ ನಿರೂಪಿತವಾಗಿದೆ. ಅಂತೆಯೇ ನಾವೂ ಅರ್ಘ್ಯ ನೀಡಿದರೆ ಲೋಕರಕ್ಷಣ ಕಾರ್ಯದಲ್ಲಿ ನಾವೂ ಭಾಗಿಗಳಾಗುತ್ತೇವೆ. ಭಗವಂತನು ಪ್ರೀತನಾಗುತ್ತಾನೆ. ಅರ್ಘ್ಯ ನೀಡಿದ್ದರೆ ಮುಂದಿನ ಜನ್ಮದಲ್ಲಿ ನಾವೇ ಮಂದೇಹರಾಗಿ ಹುಟ್ಟುತ್ತೇವೆ.

ಅರ್ಘ್ಯಕ್ಕೆ ತೆಗೆದುಕೊಳ್ಳುವ ನೀರಿನಲ್ಲಿ ಶುಕ್ರಾಚಾರ್ಯರ ಆದೇಶದಂತೆ ಅಸುರ ಕುಲ ಸಂರಕ್ಷಣೆಗಾಗಿ ವೇತ್ರಪ ಎಂಬ ಅಸುರ ಅಡಗಿರುತ್ತಾನೆ. ಅವನನ್ನು ಓಡಿಸಲು, ಬಲಗೈ ಕಿರುಬೆರಳಿನಿಂದ ಓಂ.. ಭೂಃ ... ಭುವಃ ಸ್ವಃ., ವಂ, ಹ್ರೀಂ ಎಂದು ಪ್ರಣವವ್ಯಾಹೃತಿಗಳನ್ನು ಬರೆಯಬೇಕು.

## ನಿರಸ್ತಃ ಪರಾವಸುಃ

ಪರಾವಸು ಹಾಗೂ ಅರ್ವಾವಸು ರೈಭ್ಯಮುನಿಯ ಮಕ್ಕಳು. ಬೃಹದ್ಯುಮ್ನ ರಾಜನ ಸತ್ರದಲ್ಲಿ ಋತ್ವಿಕ್ಕುಗಳಾಗಿದ್ದರು. ಪ್ರಮಾದವಶಾತ್ ಪರಾವಸು ತನ್ನ ತಂದೆಯನ್ನು ಕೊಂದ. ನನಗಾಗಿ ಪ್ರಾಯಶ್ಚಿತ್ತ ಕರ್ಮವನ್ನಾಚರಿಸು ಎಂದು ತಮ್ಮನನ್ನು ಯಜ್ಞಶಾಲೆಯಿಂದ ಹೊರಗೆ ಕಳುಹಿಸಿದ.. ತಮ್ಮನು ಪ್ರಾಯಶ್ಚಿತ್ತವನ್ನಾಚರಿಸಿ, ಹಿಂತಿರುಗಿದಾಗ ಈತನು ಬ್ರಹ್ಮಹತ್ಯಾ ಪಾತಕಿ ಎಂದು ಹೇಳಿ ರಾಜ ಭಟರ ಸಹಾಯದಿಂದ ಅವನಿಗೆ ಯಜ್ಞಶಾಲೆಯಲ್ಲಿ ಪ್ರವೇಶಿಸದಂತೆ ಮಾಡಿದ. ಅರ್ವಾವಸು ಕೋಪಿಸಿಕೊಳ್ಳಲಿಲ್ಲ. ತಪಸ್ಸಿನಿಂದ ಸೂರ್ಯ ಮಂತ್ರವನ್ನು ಕಂಡುಕೊಂಡು ಮಹರ್ಷಿಯಾದ. ದೇವತೆಗಳೆಲ್ಲಾ ಪ್ರೀತರಾದರು. ಸತ್ರದಲ್ಲಿ ಅರ್ವಾವಸುವಿಗೆ ಮಾತ್ರ ಅವಕಾಶ ಕೊಟ್ಟು ಪರಾವಸುವನ್ನು ತೊಲಗಿಸಿದರು. ಪರಾವಸು ತೊಲಗಲಿ, ಅರ್ವಾವಸು

ನನ್ನನ್ನು ಆಹ್ವಾನಿಸಿ, ಯಜ್ಞವೇದಿಕೆಯಲ್ಲಿ ಸ್ಥಾನ ಕೊಟ್ಟರೆ ನಾನಿರುತ್ತೇನೆ ಎಂದು ಪ್ರತಿಯೊಬ್ಬ ದೇವತೆಯೂ ಆಗ ಹೇಳಿದನು. ಸತ್ಕರ್ಮಾಚರಣೆಗೆ ಸರಿಯಾದ ಸ್ಥಾನ ಸಿಗದಿದ್ದಾಗ, ವಿಘ್ನಭೀತಿ ಉಂಟಾದಾಗ ಈ ಕಥೆಯನ್ನು ಸ್ಮರಿಸಿ (ಮಹಾ ಭಾರತ ಸ್ಕಾಂದ ಪುರಾಣ) ದೇವತೆಗಳನ್ನು ಬೇಡಬೇಕು. ಆಸನ ಪ್ರತಿನಿಧಿಯೆನಿಸಿದ ಒಂದು ದಾರವನ್ನು ಎರಡು ತುಂಡುಮಾಡಿ, ಎಡಗೈಯಲ್ಲಿರುವ ಪರಾವಸುವಿನ ಆಸನಪ್ರತಿನಿಧಿಯಾದ ತುಂಡನ್ನು ಎಡಕ್ಕೆ ಎಸೆದು ಬಲಗೈಯಲ್ಲಿರುವ ಅರ್ವಾವಸುವಿನ ಆಸನಪ್ರತಿನಿಧಿಯಾದ ತುಂಡನ್ನು ಆಸನದ ಬುಡಕ್ಕೆ ಹಾಕಬೇಕು.

# ಲೋಕನ್ಯಾಸ

**ಭೂರ್ಲೋಕಂ ಪಾದಯೋರ್ಮಧ್ಯೇ ಭುವರ್ಲೋಕಂ ತು ಜಾನುನೋಃ ।**
**ಸ್ವರ್ಲೋಕಂ ಕಟಿದೇಶೇ ಚ ನಾಭಿದೇಶೇ ಮಹಸ್ತಥಾ ॥**
**ಜನಲೋಕಂ ಕಂಠದೇಶೇ ಮುಖಬಿಂಬೇ ತಪಸ್ತಥಾ ।**
**ಭ್ರುವೋರ್ಲಲಾಟಸಂಧೌ ತು ಸತ್ಯಲೋಕಂ ಪ್ರತಿಷ್ಠಿತಮ್ ॥**

'ಭೂಃ' ವ್ಯಾಹೃತಿಯಿಂದ ಪಾದಗಳ ಮಧ್ಯದಲ್ಲಿ, 'ಭುವಃ' ವ್ಯಾಹೃತಿಯಿಂದ ಮೊಣಕಾಲುಗಳಲ್ಲಿ, 'ಸ್ವಃ' ವ್ಯಾಹೃತಿಯಿಂದ ಸೊಂಟದಲ್ಲಿ, 'ಮಹಃ' ವ್ಯಾಹೃತಿಯಿಂದ ಹೊಕ್ಕಳಲ್ಲಿ, 'ಜನಃ' ವ್ಯಾಹೃತಿಯಿಂದ ಕೊರಳಿನಲ್ಲಿ, 'ತಪಃ' ವ್ಯಾಹೃತಿಯಿಂದ ಮುಖದಲ್ಲಿ, 'ಸತ್ಯಂ' ವ್ಯಾಹೃತಿಯಿಂದ ಹುಬ್ಬುಗಳ ನಡುವೆ ಆಯಾ ಲೋಕದಲ್ಲಿರುವ ಭಗವದ್ರೂಪವನ್ನು ಆಯಾ ನಾಮದಿಂದ ನ್ಯಾಸಮಾಡಬೇಕು.

# ಋಷಿ-ಛಂದೋ-ದೇವತೆಗಳ ಸ್ಮರಣೆ

ಮಂತ್ರಜಪದ ಮೊದಲು ಆಯಾ ಮಂತ್ರದ ಋಷಿ, ಛಂದೋಭಿಮಾನಿ ಹಾಗೂ ದೇವತೆ ಇವರ ಸ್ಮರಣೆ ಮಂತ್ರಜಪಕ್ಕೆ ಬೇಕಾದ ಜ್ಞಾನ ಹಾಗೂ ಭಕ್ತಿಗೂ ಭಕ್ತಿಗಳ ಉದ್ಬೋಧಕವಾಗಿ ವಿಹಿತವಾಗಿದೆ. ಅದಕ್ಕಾಗಿಯೇ ಋಷಿಯನ್ನು ಸ್ಮರಿಸುವಾಗ ತಲೆಯನ್ನೂ, ಛಂದೋಭಿಮಾನಿಗಳನ್ನು ಸ್ಮರಿಸುವಾಗ ಹೃದಯವನ್ನೂ ಹೃದಯವನ್ನೂ ಸ್ಪರ್ಶಿಸಬೇಕೆಂದು ಯೋಗದೀಪಿಕಾ ತಿಳಿಸಿದೆ.

**ಋಷ್ಯಾದೀಂಶ್ಚ ತತೋ ನ್ಯಸ್ಯೇನ್ಮೂರ್ಧ್ನಿ ವಾಚಿ ತಥಾ ಹೃದಿ ।**

ಆಯಾ ಋಷಿ, ಅವನ ಅಂತರ್ಯಾಮಿ ವೇದವ್ಯಾಸರು ತಲೆಯಲ್ಲಿದ್ದುಕೊಂಡು ಮಂತ್ರಜಪಕ್ಕೆ ಬೇಕಾದ ವೈಚಾರಿಕತೆಯನ್ನು ಒದಗಿಸಿಕೊಡಲಿ. ಮಂತ್ರದ ಛಂದೋಭಿಮಾನಿದೇವತೆಗಳು ವಾಗಿಂದ್ರಿಯದಲ್ಲಿದ್ದುಕೊಂಡು ಮಂತ್ರದ ಅರ್ಥಾನುಸಂಧಾನಕ್ಕೆ ಪುಷ್ಟಿ ನೀಡುವಂತಹ ಉಚ್ಚಾರಣೆಯನ್ನು ಹೊರಡಿಸಲಿ. ಮಂತ್ರಪ್ರತಿಪಾದ್ಯದೇವತೆ ಹೃದಯದಲ್ಲಿ ಸನ್ನಿಹಿತನಾಗಿ ಆ ಮಂತ್ರದಿಂದ ತನ್ನನ್ನು

ಧ್ಯಾನಿಸಲು ಬೇಕಾದ ಹೃದವಂತಿಕೆಯನ್ನು ಅನುಗ್ರಹಿಸಲಿ ಎಂಬ ಅನುಸಂಧಾನದೊಂದಿಗೆ ಹಾಗೆ ಸ್ಪರ್ಶಿಸಬೇಕು.

## ಅಕ್ಷಮಾಲೆ

ಮಧ್ಯದ ಬೆರಳು, ಅನಾಮಿಕಾಬೆರಳು ಹಾಗೂ ಅಂಗುಷ್ಠಬೆರಳು - ಇವುಗಳಿಂದಲೇ ಜಪಮಾಲೆ ಹಿಡಿದು ಜಪಿಸಬೇಕು. ತೋರ್ಬೆರಳು ಹಾಗು ಕನಿಷ್ಠಬೆರಳುಗಳಿಂದ ಜಪಮಾಲೆಯನ್ನು ಮುಟ್ಟಲೇಬಾರದು.

**ಮಧ್ಯಮಾನಾಮಿಕಾಂಗುಷ್ಠೈರ್ಜಪೇನ್ನಾನ್ಯೈಃ ಕದಾಚನ ।**
**ತರ್ಜನ್ಯಾ ನ ಸ್ಪೃಶೇನ್ಮಾಲಾಂ ಕನಿಷ್ಠೇನ ಕದಾಚನ ॥**

ಜಪಮಾಲೆ ಜಪಕಾಲದಲ್ಲಿ ಮತ್ತೊಬ್ಬರಿಗೆ ಕಾಣದಂತೆ ಗೋಪ್ಯವಾಗಿರಬೇಕು. ಮತ್ತೊಬ್ಬರ ದೃಷ್ಟಿಗೆ ಗೋಚರಿಸಿತೆಂದರೆ ಅದು ಜಪಕ್ಕೆ ಅನರ್ಹ ಎನಿಸುವುದು. ಗುರುಗಳಿಗೂ ಅದನ್ನು ಕಾಣಿಸಬಾರದು.

**ಜಪಮಾಲಾ ಪ್ರಗೋಪ್ತವ್ಯಾ ಜಪಕಾಲೇ ಸುಮೇಧಸಾ ।**
**ಪರದೃಷ್ಟಿಕೃತಾ ಮಾಲಾ ನಿಷ್ಫಲಾ ಜಪಕರ್ಮಣಿ ।**
**ಅಕ್ಷಮಾಲಾ ಪ್ರಗೋಪ್ತವ್ಯಾ ಗುರೋರಪಿ ನ ದರ್ಶಯೇತ್ ॥**

ಜಪಸರ ಬಿದ್ದರೆ ಶಿಖಾಮಣಿ ದಾಟಿದರೆ ಮೂರು ಪ್ರಾಣಾಯಾಮ ಮಾಡಿ ಆಚಮನ ಮಾಡಬೇಕು.

**ಪಾತೇ ತು ಜಪಮಾಲಾಯಾ ಮೇರೋರುಲ್ಲಂಘನೇ ಸತಿ ।**
**ಪ್ರಾಣಾಯಾಮತ್ರಯಂ ಕೃತ್ವಾ ಧೃತ್ವಾಪೋಶನಮಾಚರೇತ್ ॥**

ಸಂಧ್ಯಾವಂದನದ ಅಂಗವಾದ ಗಾಯತ್ರೀಜಪವನ್ನು ಬೆರಳುಗಳ ಸಂಧಿಗಳಿಂದ ಎಣಿಸಬೇಕು. ಅಷ್ಟಮಹಾಮಂತ್ರಾಂತರ್ಗತವಾದ ಗಾಯತ್ರೀಯನ್ನು ಜಪಿಸುವಾಗ ಜಪಮಾಲೆಯ ಮೂಲಕ ಜಪಿಸಬೇಕು.

**ಹಸ್ತೇನ ವಾ ಮಾಲಯಾ ವಾ ಗಾಯತ್ರೀಜಪಮಾಚರೇತ್ ।**
**ವೇದಮಾತಾ ತು ಗಾಯತ್ರೀ ವೇದಃ ಪರ್ವಸು ಗೀಯತೇ ॥**
**ತಸ್ಮಾಜ್ಜಪೇಚ್ಚ ಗಾಯತ್ರೀಂ ಪರ್ವಭಿರ್ದ್ವಿಜಸತ್ತಮ ॥**
**ಉಕ್ತಃ ಸಂಧ್ಯಾವಂದನಗಾಯತ್ರೀಜಪಃ ಹಸ್ತಪರ್ವಭಿಃ ಶಿಷ್ಟೈಃ ಕ್ರಿಯತೇ ।**
**ಅಷ್ಟಮಹಾಮಂತ್ರಾಂತರ್ಗತಗಾಯತ್ರಿ ಜಪಸ್ತು ಜಪಮಾಲಯಾ ॥**

[ಸ್ಮೃತ್ಯರ್ಥಸಾಗರ]

# ಆಶೌಚದಲ್ಲಿ ಸಂಧ್ಯಾವಂದನೆ

ಆಶೌಚ ತಿಳಿಯುವ ಮೊದಲೆ ಜಪ, ಹೋಮ, ಮದುವೆ, ಶ್ರಾದ್ಧಾದಿಗಳು ಆರಂಭವಾಗಿದ್ದರೆ ಆ ದಿನದ ಆ ಕಾರ್ಯಕ್ಕೆ ಆಶೌಚದ ಅಡ್ಡಿಯಿಲ್ಲ ಎಂದು ಮತ್ಸ್ಯಪುರಾಣದ ಮಾತು -

ವ್ರತಯಜ್ಞವಿವಾಹೇಷು ಶ್ರಾದ್ಧೇ ಹೋಮೇಽರ್ಚನೇ ಜಪೇ ।
ಆರಬ್ಧೇ ಸೂತಕಂ ನ ಸ್ಯಾದನಾರಬ್ಧೇ ತು ಸೂತಕಮ್ ॥

ಜಾತಾಶೌಚ ಮೃತಾಶೌಚಗಳಲ್ಲಿ ಜಪಸಂಕೋಚವಿದೆ ಹೊರತು ಜಪತ್ಯಾಗ ಇಲ್ಲ ಎಂದೆ ಧರ್ಮಶಾಸ್ತ್ರಗಳ ಮಾತುಗಳು-

ಅಷ್ಟಾವಿಂಶತಿಕೃತ್ವೋಽತ್ರ ಗಾಯತ್ರೀಂ ಮನಸಾ ಜಪೇತ್ । (ದೇವಜಾನೀಯ)
ಸೂತಕೇ ಮೃತಕೇ ಚೈವ ರೋಗೋತ್ಪತ್ತೌ ತಥಾಽಧ್ವನಿ ।
ಮಾನಸೀಂ ತು ಜಪೇತ್ಸಂಧ್ಯಾಂ ಕುಶವಾರಿವಿವರ್ಜಿತಾಮ್ ॥

ಸೂತಕೇ ಮೃತಕೇ ವಾಽಪಿ ಸಂಧ್ಯಾಕರ್ಮ ನ ಸಂತ್ಯಜೇತ್ ॥

ಅರ್ಘ್ಯಾಂತಾ ಮಾನಸೀ ಸಂಧ್ಯಾ ಜ್ಞೇಯಾ ಪ್ರಣವವರ್ಜಿತಾ ।
ಸೂತಕೇ ಮೃತಕೇ ಕುರ್ಯಾತ್ಪ್ರಾಣಾಯಾಮಮಮಂತ್ರಕಮ್ ।
ತಥಾ ಮಾರ್ಜನಮಂತ್ರಾಂಶ್ಚ ಮನಸೋಚ್ಚಾರ್ಯ ಮಾರ್ಜಯೇತ್ ॥

ಗಾಯತ್ರೀಂ ಸಮ್ಯಗುಚ್ಚಾರ್ಯ ಸೂರ್ಯಾಯಾರ್ಘ್ಯಂ ನಿವೇದಯೇತ್ ।
ಮಾರ್ಜನಂ ತು ನ ವಾ ಕಾರ್ಯಮುಪಸ್ಥಾನಂ ನ ಚೈವ ಹಿ ॥
ಆಪನ್ನಶ್ಚಾಶುಚೌ ಕಾಲೇ ತಿಷ್ಠನ್ನಪಿ ಜಪೇದ್ದಶ ॥

# ಪಂಚಮುದ್ರಾ ಧಾರಣಕ್ರಮಃ



## ಪಂಚಮುದ್ರೆಗಳು



ಚಕ್ರಮುದ್ರಾ



ಶಂಖಮುದ್ರಾ



ಗದಾಮುದ್ರಾ



ಪದ್ಮಮುದ್ರಾ



ನಾರಾಯಣಮುದ್ರಾ

## ಅರ್ಘ್ಯಪ್ರದಾನ ಯಂತ್ರಮ್

2. ಓಂ
6. ವಂ
5. ಸ್ವಃ
3. ಭೂಃ
1. ಹ್ರೀಂ
4. ಭುವಃ

ಯಂತ್ರಲೇಖನಂ : ಕೋಣಮಧ್ಯೇ ತು ಹ್ರೀಂಕಾರಂ ಕೋಣಾಗ್ರೇ ಪ್ರಣವಂ ನ್ಯಸೇತ್ । ದಲೇಷು ವ್ಯಾಹೃತಿಶ್ಚೈವ ಮಧ್ಯೇ ವರುಣದೈವತಮ್ ॥ ಲಿಖಿತ್ವಾ ಮಂತ್ರರಾಜಂ ತು ಪಶ್ಚಾದರ್ಘ್ಯಂ ಸಮಾಚರೇತ್ ॥ (ಇತಿ ಲಿಖಿತ್ವಾ)

## ಅಗ್ನಿಕಾರ್ಯ ಮತ್ತು ಔಪಾಸನ ಕುಂಡ

ಈಶಾನ್ಯ ಪೂರ್ವ ಆಗ್ನೇಯ
IV ದೇವಸವಿತುಃ
ಉತ್ತರ ದಕ್ಷಿಣ
ಸರಸ್ವತೇ III
ಅಗ್ನಿ ಕುಂಡ
ಅದಿತೇ I
ಅನುಮತೇ II
ವಾಯುವ್ಯ ಪಶ್ಚಿಮ ನೈರುತ್ಯ

## कलशे प्रदर्शनीया पञ्चमुद्राः



(निर्विषीकरणार्थं) तार्क्ष्यमुद्रा

tārkṣyamudrā



(अमृतीकरणार्थं) धेनुमद्रा

dhēnumudrā



(पवित्रीकरणार्थं) शङ्खमुद्रा

śaṅkhamudrā



(दिग्बन्धनार्थं) गदामुद्रा

gadāmudrā



(संरक्षणार्थं) सुदर्शनमुद्रा

sudarśanamudrā

## ಆವಾಹನಾದಿ ಸಪ್ತಮುದ್ರಾ



೧. ಆವಾಹನೀ ಮುದ್ರಾ
ಆವಾಹಿತೋ ಭವ



೨. ಸ್ಥಾಪನೀ ಮುದ್ರಾ
ಸಂಸ್ಥಾಪಿತೋ ಭವ



೩. ಸನ್ನಿಧಾನೀ ಮುದ್ರಾ
ಸನ್ನಿಹಿತೋ ಭವ



೪. ಸಂರೋಧಿನೀ ಮುದ್ರಾ
ಸನ್ನಿರುದ್ಧೋ ಭವ



೫. ಸಮ್ಮುಖೀ ಮುದ್ರಾ
ಸಮ್ಮುಖೋ ಭವ



೬. ಅವಗುಂಠನೀ ಮುದ್ರಾ
ಅವಗುಂಠಿತೋ ಭವ



೭. ಪ್ರಸಾದ ಮುದ್ರಾ
ಸುಪ್ರಸನ್ನೋ ಭವ

ಶ್ರೀಮಧ್ವೇಶಾರ್ಪಣಮಸ್ತು

# ಪಂಚಗವ್ಯ ಚೌಕ




ಶ್ರೀಮಧ್ವೇಶಾರ್ಪಣಮಸ್ತು

## ಹರಿವಾಯು ಪ್ರಕಾಶನದ ಕೃತಿಗಳು

ನಾರಾಯಣವರ್ಮ
ಭೀಷ್ಮಸ್ತವರಾಜಃ
ಭಗವದ್ಧ್ಯಾನಮ್
ಕಥಾಮೃತಲತಾ
ಸ್ತ್ರೀಧರ್ಮ
ಸ್ಫೂರ್ತಿ ಎಮಕ್ಕಳ ಕಥೆಗಳು
ದ್ವಾದಶಸ್ತೋತ್ರೇಣಿ ಎಮಾದ
ನಿತ್ಯಾನುಷ್ಠಾನಸಂಗ್ರಹ



## ಲೇಖಕರ ಇತರ ಕೃತಿಗಳು

ಚಿಂತೆಗೊಂದು ಚಿಕಿತ್ಸೆ
ಶರಣಾಗತಿ
ದಾಸಭಾರತೀ
ಶ್ರೀ ಸುಶಮೀಂದ್ರ ನಮನ

## ಸಂಗ್ರಹ

ಶ್ರೀಮದ್ಭಾಗವತಸಾರ
ಶ್ರೀರಾಮಾಯಣಸಾರ
ಪ್ರಮೇಯಮುಕ್ತಾವಲೀ
ಭಾಗವತ ಸಂದೇಶ ಸಪ್ತತಿ
ಹೊಸಕಣ್ಣು



